61

111

ಶ್ರೀಃ

॥ ಶ್ರೀ ವೇಂಕಟೇಶಾಯ ನಮಃ ॥

ಶ್ರೀಮತೇ ರಾಮಾನುಜಾಯ ನಮಃ



# ಶ್ರೀ ವೇಂಕಟೇಶ ಪದಾವಲಂಬ ಸ್ತೋತ್ರಂ

ಜಗ್ಗು ಶಿಂಗರಾರ್ಯ ವಿರಚಿತಂ

ಕರ್ಣಾಟಕ ಭಾಷಾ ತಾತ್ಪರ್ಯ ಸಮೇತಂ

ಕ್ರಯಃ 75 ನಯೇ ಪೈಸೆ

ಶ್ರೀಃ

॥ ಶ್ರೀ ವೇಂಕಟೇಶಾಯ ನಮಃ ॥

ಶ್ರೀಮತೇ ರಾಮಾನುಜಾಯ ನಮಃ



# ಶ್ರೀ ವೇಂಕಟೇಶ ಪದಾವಲಂಬ ಸ್ತೋತ್ರಂ

ಜಗ್ಗು ಶಿಂಗರಾರ್ಯರ್ ವಿರಚಿತಂ

ಕರ್ಣಾಟಕ ಭಾಷಾ ತಾತ್ಪರ್ಯ ಸಮೇತಂ

ಕ್ರಯಃ 75 ನಯೇ ಪೈಸೆ

# ಮುನ್ನುಡಿ

ಸಹೃದಯರಾದ ಆಸ್ತಿಕ ಮಹಾಶಯರಲ್ಲಿ ವಿಜ್ಞಾಪನೆ.

"ಕಲೌ ವೇಂಕಟನಾಯಕಃ" ಎಂದು ಹೇಳಿರುವಂತೆ ಈ ಕಲಿಯುಗ ದಲ್ಲಿ ಅರ್ಚಾವತಾರದಲ್ಲಿಯೂ ಕೂಡ ವೈಭವ ವಿಸ್ತೃತವಾದ ತನ್ನ ಮಹತ್ವದ ಪ್ರಭೆಯನ್ನು ಭಕ್ತವೃಂದದ ಮೇಲೆ ಪರಿಣಾಮಕಾರಿಯಾಗುವಂತೆ ಪ್ರಯೋಗಿ ಸುವ ಶಕ್ತಿಯು ದೇವರುಗಳಲ್ಲೆಲ್ಲಾ ಈ ವೇಂಕಟರಮಣಸ್ವಾಮಿಗೇ ಅತ್ಯಂತ ಪ್ರಬಲವಾಗಿದೆಯೆಂಬ ವಿಷಯವು ಸರ್ವಜನ ಸಮ್ಮತವಷ್ಟೆ ?

ಪರಮಾತ್ಮನ ಪ್ರೇರಣೆಯಿಂದ ಅನೇಕ ಭಗವತ್‌ಸ್ತೋತ್ರ ಕಾವ್ಯ ನಾಟಕಾದಿಗಳನ್ನು ರಚಿಸಿರುವ ನನಗೆ ಇಂತಹ ಈ ವೇಂಕಟರಮಣಸ್ವಾಮಿಯ ವಿಚಾರವಾಗಿಯೂ ಯಾವುದಾದರೂ ಒಂದು ಕೃತಿಯನ್ನು ರಚಿಸಬೇಕೆಂಬ ಕುತೂಹಲವು ಬಹಳ ದಿನಗಳಿಂದಲೂ ಆಗಾಗ ಮನಸ್ಸಿನಲ್ಲಿ ಉದ್ಭವಿಸುತ್ತಿತ್ತು. ಹೀಗಿದ್ದರೂ ನನ್ನ ಪ್ರಯತ್ನಶೈಥಿಲ್ಯದಿಂದಲೋ ಅಥವಾ ಈ ಶ್ರೀನಿವಾಸ ದೇವನ ಅನುಜ್ಞೆಯಿಲ್ಲದುದರಿಂದಲೋ ಅಂತೂ ಇದುವರೆವಿಗೂ ಶ್ರೀನಿವಾಸ ಸ್ವಾಮಿಯ ವಿಷಯವಾಗಿ ಯಾವುದೊಂದು ಕಾವ್ಯವೂ ಉದಯಿಸಲಿಲ್ಲವು. ಹೀಗಿರುವ ನನಗೆ ಆಪ್ತತಮರಾದ ಒಬ್ಬ ಮಹನೀಯರು ಕೆಲವು ದಿನಗಳ ಹಿಂದೆ "ಶ್ರೀ ವೇಂಕಟೇಶ ಪದಾವಲಂಬ ಸ್ತೋತ್ರವೆಂಬ ಕಾವ್ಯವನ್ನು ನೀವು ರಚಿಸಿಕೊಡಬೇಕು" ಎಂದು ಪದೇ ಪದೇ ಒತ್ತಿ ಹೇಳುತ್ತಿದ್ದರು. ಆದರೂ ಪ್ರಯತ್ನಪರನಾಗದೆ ಸುಮ್ಮನೇ ಇರುತ್ತಿದ್ದ ನನಗೆ ಅವರ ಬಲಾತ್ಕಾರ ಪೂರ್ವಕವಾದ ಪ್ರೇರಣೆಯು ಅಧಿಕವಾಯಿತು. ಈ ರೀತಿಯಾದ ನಿರ್ಬಂಧ ದಿಂದ ಬದ್ಧನಾದ ನಾನು ಹಾಗೆಯೇ ಮನಸ್ಸಿನಲ್ಲಿ ವಿಮರ್ಶೆಮಾಡಿ ನೋಡಿ ಶ್ರೀನಿವಾಸಸ್ವಾಮಿಯ ಅನುಗ್ರಹಪೂರ್ವಕವಾದ ಅಪ್ಪಣೆಯೇ ಇವರ ಮು ಖೇನ ಈ ರೀತಿ ಹೊರಟಿದೆಯೆಂದು ನಿಶ್ಚಯಿಸಿಕೊಂಡು ಆ ಪರಮಾತ್ಮನಲ್ಲಿ ನ್ಯಸ್ತಭರನಾಗಿ ಅವನನ್ನು ಪ್ರಾರ್ಥಿಸಿ ಸ್ತೋತ್ರ ರಚನೆಗೆ ತೊಡಗಿದೆನು. ಆ

ಸಮಯದಲ್ಲಿ "ನಿಮಿತ್ತಮಾತ್ರಂ ಭವ" ಎಂದು ಹೇಳಿದಂತೆ ಮನಸ್ಸಿಗೆ ಸ್ಫೂರ್ತಿ ಯಾದುದರಿಂದ ಬಹಳ ಸಂತೋಷಭರಿತನಾಗಿ ಶ್ರಮವಿಲ್ಲದೇ ಸುಲಭವಾಗಿ ಈ ಸ್ತೋತ್ರವನ್ನು ರಚಿಸಿದೆನು ಅಥವಾ ಆ ಸ್ವಾಮಿಯೇ ರಚಿಸಿದನು. ದುಷ್ಕರಂ ಕಾವ್ಯನಿರ್ಮಾಣಂ ರಸಭಾವಗುಣೋಜ್ವಲಂ। ತತ್ರಾಪಿ ಶ್ರೀಶಚರಿತ ಗ್ರಥನಂತು ಸುದುಷ್ಕರಂ ॥ ಎಂದು ಹೇಳಿರುವಂತೆ ದೋಷರಹಿತವಾಗಿ ರಸ ಭಾವಾದಿಗುಣಗಳಿಂದ ರಾಜಿಸುತ್ತಿರುವ ಕಾವ್ಯನಿರ್ಮಾಣವು ಕಷ್ಟತರವೆಂದೂ ಅದರಲ್ಲಿಯೂ ಭಗವಂತನಾದ ಶ್ರೀ ನಾಥನ ಚರಿತ್ರೆಯನ್ನು ಒಳ್ಳೆಯ ರಸ ಭಾವಾದಿಗುಣಗಳಿಂದ ಪ್ರಕಾಶಿಸುವಂತೆ ರಚಿಸುವುದು ಇನ್ನೂ ಬಹಳ ಕಷ್ಟಕರ ವೆಂದೂ ಹೇಳುವರು. ಆದರೆ ಈ ಶ್ರೀವೇಂಕಟೇಶ ಪದಾವಲಂಬ ಸ್ತೋತ್ರವು ಮೃದು ಮಧುರ ಪದ ವಿನ್ಯಾಸದಿಂದಲೂ ಶ್ರೀನಿವಾಸದೇವನಲ್ಲಿ ಭಕ್ತಿ ಭಾವೋ ದ್ರೇಕಪ್ರದವಾದ ರಸಾಲಂಕಾರಾದಿಗಳಿಂದಲೂ ಸಹೃದಯಾಕರ್ಷಕವಾಗಿ ರಂಜಿ ಸುತ್ತಿರುವಂತೆ ರಚಿಸಿರುವ ವಿಷಯದಲ್ಲಿ ನನ್ನ ಯಾವುದೊಂದು ಪ್ರಯತ್ನ ಶಕ್ತಿ ಸಾಮರ್ಥ್ಯಗಳೂ ಕಾರಣವಲ್ಲದೇ ಸಾಕ್ಷಾತ್ ಶ್ರೀನಿವಾಸ ಪರಮಾತ್ಮನ ಸರ್ವ ವಿಧಪ್ರವೃತ್ತಿಯೇ ಮುಖ್ಯ ಕಾರಣವೆನ್ನುವುದಕ್ಕೆ ಸ್ವಲ್ಪವೂ ಸಂಶಯವಿಲ್ಲವು.

ಆದುದರಿಂದ ಎಲ್ಲೈ ಭಗವದ್ಭಕ್ತರಾದ ಮಹನೀಯರೇ ! ತಾವುಗಳೆಲ್ಲರೂ ಈ ಸ್ತೋತ್ರವನ್ನು ಪ್ರೀತಿಪೂರ್ವಕವಾಗಿ ಅಂಗೀಕರಿಸಿ ಇದರಲ್ಲಿರುವ ಶ್ಲೋಕ ಗಳನ್ನೆಲ್ಲಾ ಕಂಠಪಾಠಮಾಡಿ ಕನ್ನಡ ಭಾಷೆಯಲ್ಲಿರುವ ತಾತ್ಪರ್ಯವನ್ನು ಅಧಿಕರಿಸಿ ಅರ್ಥಾನುಸಂಧಾನಪುರಸ್ಸರವಾಗಿ ಈ ಸ್ತೋತ್ರವನ್ನು ಪಠಿಸುವುದರ ಮೂಲಕ ಶ್ರೀ ವೇಂಕಟರಮಣಸ್ವಾಮಿಯಲ್ಲಿ ವಾಚಾಕೈಂಕರ್ಯವನ್ನು ಸಮ ರ್ಪಿಸುತ್ತಾ ಈ ಸೇವಕನ ಸೇವೆಯನ್ನು ಸಾರ್ಥಕಪಡಿಸಲು ತಾವುಗಳೆಲ್ಲರೂ ಭಾಗಿಗಳಾಗಬೇಕೆಂದು ಪ್ರಾರ್ಥಿಸುತ್ತೇನೆ. ಶ್ರೀ ವೇಂಕಟರಮಣಸ್ವಾಮಿಯು ಸಮಸ್ತ ಭಕ್ತರಿಗೂ ಸರ್ವಶ್ರೇಯಸ್ಸುಗಳನ್ನೂ ಉಂಟುಮಾಡುತ್ತಿರಲಿ.

ಇತಿ ಸುಜನದಾಸಃ

ಜಗ್ಗು ಶಿಂಗರಾರ್ಯಃ
ಗ್ರಂಥಕರ್ತಾ,
ಕರ್ಣಾಟಕ ಭಾಷಾ ತಾತ್ಪರ್ಯ ಲೇಖಕಃ

श्रीः

श्रीवेङ्कटेशाय नमः

श्रीमते रामानुजाय नमः

# श्रीवेङ्कटेशपदावलम्बस्तोत्रम्

भक्तोद्धृतौ विरचिताद्भुतभव्यकर्मन् !
प्रेम्णाञ्जनाद्रिशिखरे कृतसन्निधान ! ।
चेतोहरप्रवररूप ! खगेन्द्रवाह !
श्रीश्रीनिवास ! मम देहि पदावलम्बम् ॥१॥

कर्पूरचूर्णकृतदीर्घविशालभास्व-
द्दिव्योर्ध्वपुण्ड्ररमणीयललाटदेश ! ।
कर्णावलम्बिमणिकुण्डलमुग्धमूर्ते !
श्रीश्रीनिवास ! मम देहि पदावलम्बम् ॥२॥

कारुण्यशीतलकटाक्षनिषिक्तभक्त-
लोकप्रमोदभरमात्मनि संविभाव्य ।
हर्षप्रकर्षकृतमन्दविलासहास !
श्रीश्रीनिवास ! मम देहि पदावलम्बम् ॥३॥

शङ्खञ्च चक्रमपिहस्तविभूषणार्थं
भक्तावनार्थमपि बिभ्रदमेयवीर्यम् ।
स्वीयं परात्परतरत्वमहो विवृण्वन्
श्रीश्रीनिवास मम देहि पदावलम्बम् ॥४॥

वक्षस्थलावसथवारिधिकन्यकाया:
कायद्युति:स्थिरतरेव तडित्पयोदे ।
नित्यं चकास्ति तव मेचकविग्रहेऽस्मिन्
श्रीश्रीनिवास ! मम देहि पदावलम्बम् ॥५॥

श्रीवत्सकौस्तुभमणिप्रवराभिरामं
लक्ष्मीविहारसुखयोग्यमुरो विशालम् ।
लिप्तं च चन्दनरसै:परिदर्शयन्मे
श्रीश्रीनिवास ! मम देहि पदावलम्बम् ॥६॥

स्फीतातिदीर्घविलसद्भुजभूषणार्थं
केयूरवत्ततफणौ फणिनौ दधानः ।
त्वं सर्पभूषण इहासि वृषाद्रिशृङ्गे
श्रीश्रीनिवास ! मम देहि पदावलम्बम् ॥७॥

पादौ समाश्रयत मोक्षसुखप्रदौ मे
मर्त्या इतीहसततं करमुद्रया त्वम्
सन्दर्शयस्यखिलभक्तजनाय तस्मात्
श्रीश्रीनिवास ! मम देहि पदावलम्बम् ॥८॥

आजानुलम्बितभुजो भुजगाद्रिनाथ !
संकुञ्चितात्मकरमुद्रिकया ब्रवीषि ।
संसारसिन्धुरिह वः किल जानुदघ्नः
इत्थं ततोऽद्य मम देहि पदावलम्बम् ॥९॥

आपादमस्तकमनर्घमनोज्ञरत्न-
भूषाभिराम ! घनमेचककायकान्ते ।
सर्वेश्वरत्वकथनोच्चकिरीटमौले !
श्रीश्रीनिवास ! मम देहि पदावलम्बम् ॥१०॥

पीताम्बरेणच सुगन्धिसुमावलीनां
माल्यैश्च रत्नमय दिव्यविभूषणैश्च ।
संप्रेक्षकाक्षिहृदयापहृतिप्रवीण !
श्री श्रीनिवास मम देहि पदावलम्बम् ॥११॥

सर्वत्र हीरमयदीप्रविभूषणैस्तैः
त्वन्नीलगात्रमखिलं समलङ्कृतं यत् :
दर्शं क्षपोडुनभसस्सदृशं विभाति
श्रीश्रीनिवास ! मम देहि पदावलम्बम् ॥१२॥

फुल्लाब्जनेत्रमनतिस्मितमुन्नसाग्रं
सुभ्रूच्चरत्नमकुटं ततफालमीप्स्यम् ।
पादौश्रयेति वदतीव मुखाम्बुजं ते
तद्वेङ्कटेश ! मम देहि पदावलम्बम् ॥१३॥

वज्रध्वजाङ्कुशसरोरुहशङ्खचक्र-
कल्पद्रुलाञ्छितपदाम्बुजलब्धकीर्ते ! ।
त्रैविक्रमक्रमविनम्रसमस्तलोक !
श्रीवेङ्कटेश ! मम देहि पदावलम्बम् ॥१४॥

ब्रह्मादयोऽप्यखिलदेवगणास्त्वदीय-
श्रीपादपद्ममहिमानमवेक्ष्य भक्त्या ।
तत्पाददर्शनकृते प्रतिपालयन्ति
श्रीवेङ्कटेश ! मम देहि पदावलम्बम् ॥१५॥

गोपीजनस्तनतटेषु बलीन्द्रशीर्षे-
कालीयमूर्ध्नि सुकृतौ शकटासुरे च ।
अश्मात्मयोषिति रमाकरयोस्स्थितं यत्
तत्तो प्रदर्श्य मम देहि पदावलम्बम् ॥१६॥

किं नेत्रयोः किमधरे किमुदारफाले
किं वक्षसीह किमु दीर्घभुजेषु तेऽहम् ।
किं जङ्घयोः किमुपदोः प्रहिणोमि दृष्टिं
श्रीवेङ्कटेश ! मम देहि पदावलम्बम् ॥१७॥

गन्धर्वयक्षसुरकिन्नरमानवाद्य-
दीर्घप्रणामसृणाङ्गणभव्यवेश्मन् ।
स्वर्णोज्ज्वलोच्छ्रितविमानलसद्दिगन्त !
श्रीवेङ्कटेश ! मम देहि पदावलम्बम् ॥१८॥

वैकुण्ठवास ! कलशाब्धिनिवास ! विश्व-
रूप ! प्रकृष्टरविमण्डलमध्यवर्तिन् ।
भक्तार्द्रचित्तवसते ! भुजगाद्रिनाथ
श्रीवेङ्कटेश ! मम देहि पदावलम्बम् ॥१९॥

गोपालरूप ! गरुडध्वज ! पद्मनाभ !
गोविन्द ! कृष्ण ! मधुसूदन ! वासुदेव ! ।
नारायणाच्युत ! रमेश ! हरे ! मुरारे !
श्रीवेङ्कटेश ! मम देहि पदावलम्बम् ॥२०॥

वैकुण्ठ ! केशव ! नृसिंह ! रथाङ्गपाणे !
दामोदराहिशयनाम्बुजनेत्र ! विष्णो !
दाशार्ह ! दानवरिपो ! जगदीश ! राम !
श्रीवेङ्कटेश ! मम देहि पदावलम्बम् ॥२१॥

शौरे ! चतुर्भुज ! जनार्दन ! रुक्मिणीश !
श्रीविष्टरश्रव ! उपेन्द्र ! गदाग्रजन्मन् ।
शार्ङ्गिन् ! मुकुन्द ! पुरुषोत्तम ! मुञ्जिकेश !
श्रीवेङ्कटेश ! मम देहि पदावलम्बम् ॥२२॥

प्राक्तेपरत्वसुलभत्वगुणाश्रयत्वं
प्रोक्तं यदत्र कलयन् समुपाश्रितानाम् ।
पापीयसामपिहि दर्शयसिस्वरूपं
तद्वेङ्कटेश मम देहि पदावलम्बम् ॥२३॥

वैकुण्ठलोकमपि दुग्धमहार्णवंचा-
प्यर्कस्य मण्डलमपि प्रविहायकस्मात् ? ।
अत्रागतस्त्वमिति तन्मनसा विमृश्य
श्रीवेङ्कटेश ! मम देहि पदावलम्बम् ॥२४॥

भूयस्तराणि च वसूनि दिनेदिने त्वं
संगृह्य भक्तजनतोऽवसि सर्वलोकान् ।
श्रीशस्य हन्त तव कीदृगियंच लीला
श्रीवेङ्कटेश ! मम देहि पदावलम्बम् ॥२५॥

प्राप्तुं त्वदङ्घ्रिकमलं नितरामनर्हः
पापालिभारपरिधूसरदुष्टबुद्धिः ।
भोभक्तवत्सल तथापि विमुञ्च मा मां
श्रीवेङ्कटेश ! मम देहि पदावलम्बम् ॥२६॥

यद्यप्यनन्यशरणैस्त्वदनन्यभावैः
भक्तैस्समर्चितपदः परिरक्षसीमान् !
किंतेन मय्यपिकृपां कुरु ते यशस्स्यात्
श्रीवेङ्कटेश ! मम देहि पदावलम्बम् ॥२७॥

नाहं शुको न विदुरो नविभीषणोवा
नो मारुतिर्नचबलिर्न गुहो न भीष्मः ।
पापीयसामचरमोऽस्म्यव तत्कृपालो !
तद्वेङ्कटेश ! मम देहि पदावलम्बम् ॥२८॥

गीतोपदेशमखिलं श्रुतवानहं भोः
कर्तुंतथेषदपि माधव ! नास्मि शक्तः ।
आहुस्त्वदीयकरुणामहिमानमुच्चैः
तद्वेङ्कटेश ! मम देहि पदावलम्बम् ॥२९॥

त्वंकर्मणःप्रबलतां भविनां निरूप्य
युक्त्या तटस्थइव तान्नविलोकसेचेत् ।
तादृक्कलौ नसुलभस्सुकृतीतवेष्टः
तद्वेङ्कटेश ! मम देहि पदावलम्बम् ॥३०॥

गङ्गादितीर्थमहिमाधिकपुण्यपूत-
श्रीस्वामिपुष्करणिकाप्लवधूतपापान् ।
त्वद्दास्यसक्तमनसः कृतिनस्स्मरामि
तद्वेङ्कटेश ! मम देहि पदावलम्बम् ॥३१॥

सत्यं ब्रवीमि हृदि दुस्सहदुःखदग्धः
कीटेषु बालइव खेलसि संसृतौ माम्
निक्षिप्यहन्त किमिदंसुखदं दयालोः
तद्वेङ्कटेश ! मम देहि पदावलम्बम् ॥३२॥

उक्त्वा प्रपन्नजनपालनमात्मधर्मं
रामोनचद्विरभिभाषत इत्युदीर्यं ।
त्यक्तुं कथं प्रभवसि त्वयि मां प्रपन्नं
तद्वेङ्कटेश ! मम देहि पदावलम्बम् ॥३३॥

भक्तःप्रणश्यति नमे ध्रुवमित्युदीर्य
क्रोशन्तमेवमगतिं भवतः पुरस्तात् ।
मां नेक्षसे यदि तव क्वगता प्रतिज्ञा ?
तद्वेङ्कटेश ! मम देहि पदावलम्बम् ॥३४॥

विष्वक्सेनफणीन्द्रपक्षिपतिभिर्नित्यैश्च मुक्तैस्तथा
पूर्वाचार्यवरैरनन्यशरणैर्दिव्यैर्महासूरिभिः ।
दिव्येव्योम्नितथात्रचार्चितपदोप्यस्मत्कृतार्चाप्रियः ।
श्रीशेषाचलनाथ ! देहि मम ते पादावलम्बं सदा ।।३५।।

देवाभीप्सितपूरणाय भवता नानावताराः कृताः
लोकातीतचरित्र ! विस्मयकरं माहात्म्यमाविष्कृतं ।
शेषाद्राविह दर्शयंस्तदधिकं माहात्म्यमर्चाकृतौ
श्रीशेषाचलनाथ ! देहि मम ते पादावलम्बं सदा ।।३६।।

इत्यस्यवेङ्कटपतेर्हि पदावलम्ब-
स्तोत्रं तदीयपदपङ्कजकिङ्करेण ।
श्रीशिङ्करार्यकविना रचितं विभाति
श्रेयस्करं वृषगिरीन्द्रकृपानिदानम् ।।३७।।

इति जगद्गुशिङ्करार्यविरचितं
श्री वेङ्कटेशपदावलम्बस्तोत्रं संपूर्णम् ।

श्रीः

श्रीवेङ्कटेशाय नमः

श्रीमते रामानुजाय नमः

## श्रीशेषाचलाधीशसान्निधौ मङ्गलप्रार्थनाष्टकम्

श्रीभूमिप्रमुखानुरूपमहिषीबृन्दाङ्गरागद्रवा-
मन्दानन्दकरातिसुन्दरकुचाश्लेषाङ्कितोरस्थलः ।
भाव्यैर्भक्तजनैः कृतेषु सततं नित्योत्सवेषूत्सुकः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥१॥

नानारत्नविराजमानमकुटालङ्कारमूर्धानमत्-
ब्रह्मेन्द्राद्यमरालिभिः मणिरुचा नीराजितांघ्रिद्वयः ।
विष्वक्सेनखगेशशेषरचिताशेषोपचारादृतः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥२॥

वेदान्तैरनिशं विचारनिरतैर्योमृग्यते साग्रहैः
योगी संयमनेन यं परतरं चित्ते निधत्ते सदा ।
योवा सर्वजगत्पतिस्सभगवान् श्रीमान्दयावान्महान्
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥३॥

वायुर्वातिभिया रविःप्रतपति ज्योत्स्नां विधत्ते विधुः
वेलांपालयति स्वयं जलनिधिर्वह्निर्दहत्यन्वहम् ।
यस्याव्याहतशासनान्मुररिपुस्सोऽयं जगद्व्यापकः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥४॥

नित्योजन्मजरादिभिर्विकृतिभिर्मुक्तोऽपिभक्तप्रियः
लोकत्राणकृते कृताकृतिरयं नानावतारच्छलात् ।
श्रीवत्सेन च कौस्तुभेन जयदैः पञ्चायुधैरञ्चितः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥५॥

नानाचित्रचरित्रखेलनरतो भर्तापिलक्ष्म्यास्स्वयं
पद्मावत्यभिधां वधूं च भगवानाकाशराजात्मजां ।
लक्ष्म्यंशां परिणीय सर्वजगतां कल्याणदातास्तियः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥६॥

सीतां यो मिथिलापुरे हरधनुर्भङ्क्त्वाऽग्रहीद्राघवः
श्रीकृष्णस्स्वरथेऽधिरोप्य सहसा यो रुक्मिणीमग्रहीत् ।
सोऽयंमङ्गलदायकः प्रणमतां पद्मावतीवल्लभः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥७॥

उद्वाहोत्सवपत्रिकाप्रकटनारम्भे जनाः प्रायशः
यन्नामाङ्कितमंगलस्तुतिपरं श्लोकं लिखन्त्यग्रतः ।
सोऽयंमङ्गलमूर्तिराश्रितजनत्राणोन्मुखःश्रीसखः
श्रीशेषाचलतुङ्गशृङ्गनिलयः कुर्यान्मुहुर्मङ्गलम् ॥८॥

इत्येतान् वृषशैलनेतृसविधे संप्रार्थितान्मङ्गल-
श्लोकानष्ट वरान्विवाहसमये शृण्वन्तिगायन्ति ये ।
तेषां श्रीरमणप्रसादजनितं पूर्णायुरारोग्यम-
प्यैश्वर्यं च यशश्च मङ्गलमपि प्रादुर्भवन्ति ध्रुवम् ॥९॥

इति जगद्गुरुशङ्कराचार्यविरचितं
मङ्गलप्रार्थनाष्टकं संपूर्णम्

ಶ್ರೀಃ

॥ ಶ್ರೀ ವೇಂಕಟೇಶಾಯ ನಮಃ ॥

ಶ್ರೀಮತೇ ರಾಮಾನುಜಾಯ ನಮಃ

# ಶ್ರೀ ವೇಂಕಟೇಶ ಪದಾವಲಂಬ ಸ್ತೋತ್ರಂ

॥ ಅವತಾರಿಕೆ ॥ ಶ್ರೀನಿವಾಸ ದೇವನ ಸಂಕಲ್ಪಾನುಗುಣವಾದ ಪ್ರೇರಣೆಯಿಂದ ಈ "ಶ್ರೀ ವೇಂಕಟೇಶಪದಾವಲಂಬ" ಸ್ತೋತ್ರವು ಅವನ ಕೃಪಾ ಕಟಾಕ್ಷದಿಂದಲೇ ವಿರಚಿತವಾಯಿತು. ಈ ಸ್ತೋತ್ರದ ಮೊದಲನೆಯ ಮಂಗಳ ಶ್ಲೋಕದಲ್ಲಿ ಅಂಜನಾದ್ರಿ ನಿವಾಸಿಯಾದ ಶ್ರೀನಿವಾಸದೇವನ ಭಕ್ತ ಪ್ರೇಮ ಮಹಾಮಹಿಮೆ. ಸೌಂದರ್ಯಾದಿ ಗುಣಗಳು ವರ್ಣಿಸಲ್ಪಟ್ಟಿವೆ.

॥ ಶ್ಲೋ ॥ ಭಕ್ತೋದ್ಧೃತೌ ವಿರಚಿತಾದ್ಭುತಭವ್ಯಕರ್ಮನ್ !<br>
ಪ್ರೇಮ್ಣಾಂಜನಾದ್ರಿಶಿಖರೇ ಕೃತಸನ್ನಿಧಾನ ! ।<br>
ಚೇತೋಹರಪ್ರವರರೂಪ ! ಖಗೇಂದ್ರವಾಹ !<br>
ಶ್ರೀ ಶ್ರೀನಿವಾಸ ಮಮ ದೇಹಿ ಪದಾವಲಂಬಂ ॥ ೧ ॥

(ತಾತ್ಪರ್ಯ) ಪರಮಾತ್ಮನಾದ ಎಲೈ ಶ್ರೀನಿವಾಸದೇವನೇ ! ಆಶ್ರಿತ ಭಕ್ತ ಜನರನ್ನು ಉದ್ಧಾರಮಾಡುವುದಕ್ಕಾಗಿ ಆಶ್ಚರ್ಯಕರಗಳಾದ ಮಹತ್ತರ ಕಾರ್ಯಗಳನ್ನು ವ್ಯಕ್ತಪಡಿಸುತ್ತಾ, ವೈಕುಂಠಾದಿ ದಿವ್ಯ ಭೋಗಸ್ಥಾನಗಳಿಗಿಂತಲೂ ಅಂಜನಾದ್ರಿಯೆಂದು ಪ್ರಸಿದ್ಧವಾಗಿರುವ ಈ ತಿರುಪತಿ ಕ್ಷೇತ್ರದಲ್ಲಿ ಪರಮ ಪ್ರೇಮದಿಂದ ನಿತ್ಯವಾಸವನ್ನು ಮಾಡುತ್ತಿರುವೆ. ನಿನ್ನ ರೂಪವಾದರೋ

|| ಶ್ಲೋ || ಕಾರುಣ್ಯಶೀತಲಕಟಾಕ್ಷನಿಷಿಕ್ತಭಕ್ತ
ಲೋಕಪ್ರಮೋದಭರಮಾತ್ಮನಿ ಸಂವಿಭಾವ್ಯ ।
ಹರ್ಷಪ್ರಕರ್ಷಕೃತಮಂದವಿಲಾಸಹಾಸ !
ಶ್ರೀ ಶ್ರೀನಿವಾಸ ! ಮಮ ದೇಹಿ ಪದಾವಲಂಬಂ || ೩ ||

(ತಾತ್ಪರ್ಯ) ಎಲೈ ಪುಂಡರೀಕಾಕ್ಷನೇ ! ನಿನ್ನ ಸಂದರ್ಶನಕ್ಕಾಗಿ ಬಹು ಜನ ಭಕ್ತರು ನಿತ್ಯವೂ ನಿನ್ನ ಸನ್ನಿಧಾನಕ್ಕೆ ಅಹಮಹಮಿಕಯಾ ಬರುತ್ತಿರುವರು. ಅವರನ್ನೆಲ್ಲರನ್ನೂ ನೀನು ಕರುಣಾದ್ರ್ರಶೀತಲ ಕಟಾಕ್ಷದಿಂದ ನಿರೀಕ್ಷಿಸಿ ಅನುಗ್ರಹಿಸುತ್ತಿರುವೆ. ಹೀಗೆ ನಿನ್ನ ರಾಜೀವನಯನಾವಲೋಕನಕ್ಕೆ ಪಾತ್ರರಾಗಿ ಅಪರಿಮಿತವಾದ ಆನಂದಾತಿಶಯವನ್ನು ಹೊಂದಿ ಮೈಮರೆತು ಆನಂದಬಾಷ್ಪದಿಂದ ನೆನೆಸಲ್ಪಟ್ಟ ದೇಹವುಳ್ಳ ಆ ಭಕ್ತರ ಭಕ್ತಿಯ ಪರಾಕಾಷ್ಠೆಯನ್ನು ಪ್ರತ್ಯಕ್ಷವಾಗಿ ನೀನು ನೋಡುತ್ತಿರುವೆ. ಹೀಗೆ ನಿನ್ನ ಭಕ್ತೋತ್ತಮರ ಪ್ರೇಮಾತಿಶಯವನ್ನೂ ಅದರಿಂದ ಉತ್ಪನ್ನವಾದ ಆನಂದ ವಿಶೇಷದ ಕಾರ್ಯಗಳನ್ನೂ ನೋಡಿ ಮನಸ್ಸಿನಲ್ಲಿಯೇ ಹಿಗ್ಗುತ್ತಾ ಯಾವಾಗಲೂ ಅವುಗಳನ್ನು ಭಾವಿಸುತ್ತಿರುವೆ. ಈ ಪ್ರಕಾರ ಭಾವಿಸುವುದರಿಂದ ಉಂಟಾದ ಹರ್ಷಾತಿಶಯವನ್ನು ಮೃದುಮಂದಹಾಸವಿಲಾಸದಿಂದ ವ್ಯಕ್ತಪಡಿಸುವೆಯಲ್ಲವೇ ? ಇಂತಹ ಭಕ್ತಪ್ರಿಯನಾದ ಶ್ರೀನಿವಾಸದೇವನೇ ! ನೀನು ಕೃಪೆಮಾಡಿ ನಿನ್ನ ಪಾದಾವಲಂಬನವನ್ನಿತ್ತು ನನ್ನನ್ನು ರಕ್ಷಿಸು.

|| ಅವತಾರಿಕೆ || ಈ ಶ್ಲೋಕದಲ್ಲಿ ಶಂಖಚಕ್ರಗಳನ್ನು ಧರಿಸಿರುವ ಕೈಗಳನ್ನು ಸ್ತುತಿಸಲಾಗುತ್ತದೆ.

|| ಶ್ಲೋ || ಶಂಖಂಚ ಚಕ್ರಮಪಿ ಹಸ್ತವಿಭೂಷಣಾರ್ಥಂ
ಭಕ್ತಾವನಾರ್ಥಮಪಿ ಬಿಭ್ರದಮೇಯವೀರ್ಯಂ ।
ಸ್ವೀಯಂ ಪರಾತ್ಪರತರತ್ವಮಹೋ ವಿವೃಣ್ವ
ಶ್ರೀ ಶ್ರೀನಿವಾಸ ! ಮಮದೇಹಿ ಪದಾವಲಂಬಂ || ೪ ||

(ತಾತ್ಪರ್ಯ) ಎಲೈ ಶ್ರೀನಾಥನೆ ! ಮೇಲಕ್ಕೆ ಎತ್ತಲ್ಪಟ್ಟಿರುವ ಎರಡು ಕೈಗಳಿಂದಲೂ ನೀನು ಧರಿಸಿರುವ ಶಂಖಚಕ್ರಗಳೆರಡೂ ನಿನ್ನ ಹಸ್ತಗಳಿಗೆ

Funding: Tattva Heritage Foundation,Kolkata. Digitization: eGangotri.



"ಚಂದ್ರಕಾಂತಾನನಂ, ಅತೀವ ಪ್ರಿಯದರ್ಶನಂ, ಪುಂಸಾಂದೃಷ್ಟಿಚಿತ್ತಾಪಹಾರಿಣಂ" ಎಂದು ವರ್ಣಿಸಲ್ಪಟ್ಟಿರುವಂತೆ ಸರ್ವಜನ ಮನೋಮೋಹಕವಾದ ಸೌಂದರ್ಯದಿಂದ ಕಂಗೊಳಿಸುತ್ತಿದೆ, ಮತ್ತು ವೇದಮಯನಾದ ಅನನ್ಯಾರ್ಹನಾದ ಗರುಡನನ್ನೇ ವಾಹನವನ್ನಾಗಿ ಹೊಂದಿರುವೆ. ಇಂತಹ ಸರ್ವೋತ್ತಮನಾದ ನೀನು ನನ್ನಲ್ಲಿ ಕೃಪೆಮಾಡಿ ನಿನ್ನ ಪದಾವಲಂಬನವನ್ನಿತ್ತು ಕಾಪಾಡು.

॥ ಅವತಾರಿಕೆ ॥ ಇನ್ನು ಮುಂದಿನ ಹದಿನಾರು ಶ್ಲೋಕಗಳಿಂದ ಶ್ರೀನಿವಾಸದೇವನ ಮುಖ ಮಂಡಲದಿಂದ ತೊಡಗಿ ಪಾದಕಮಲ ಪರ್ಯಂತವೂ ಅಲಂಕೃತವಾದ ದಿವ್ಯಮಂಗಳವಿಗ್ರಹವನ್ನು ವರ್ಣಿಸಲಾಗುತ್ತದೆ.

ಈ ಎರಡನೆಯ ಶ್ಲೋಕದಲ್ಲಿ ಪರಮಾತ್ಮನ ಲಲಾಟ ಪ್ರದೇಶವೂ ಕರ್ಣಪಾಶಗಳೂ ವರ್ಣಿಸಲ್ಪಟ್ಟವೆ.

॥ ಶ್ಲೋ ॥ ಕರ್ಪೂರಚೂರ್ಣಕೃತದೀರ್ಘವಿಶಾಲಭಾಸ್ವ
ದ್ದಿವ್ಯೋರ್ಧ್ವಪುಂಡ್ರರಮಣೀಯಲಲಾಟದೇಶ ! ।
ಕರ್ಣಾವಲಂಬಿಮಣಿಕುಂಡಲಮುಗ್ಧಮೂರ್ತೇ !
ಶ್ರೀ ಶ್ರೀನಿವಾಸ ಮಮ ದೇಹಿ ಪದಾವಲಂಬಂ ॥ ೨ ॥

(ತಾತ್ಪರ್ಯ) ಎಲೈ ವೇಂಕಟರಮಣಸ್ವಾಮಿಯೇ ! ವಿಸ್ತಾರವಾದ ನಿನ್ನ ಹಣೆಯಲ್ಲಿ ಶುಭ್ರವಾದ ಪಚ್ಚಕರ್ಪೂರದ ಪುಡಿಯಿಂದ ತಿದ್ದಲ್ಪಟ್ಟು, ದೀರ್ಘವಾಗಿಯೂ ವಿಶಾಲವಾಗಿಯೂ ಕಂಗೊಳಿಸುತ್ತಿರುವ ದಿವ್ಯೋರ್ಧ್ವಪುಂಡ್ರವೂ, ಕಿವಿಗಳಲ್ಲಿ ಪ್ರಕಾಶಿಸುತ್ತಿರುವ ರತ್ನಖಚಿತಗಳಾದ ಕರ್ಣಕುಂಡಲಗಳೂ ನಿನ್ನನ್ನು ದರ್ಶನಮಾಡಲು ಬಂದಿರುವ ಭಕ್ತಜನರ ಚಿತ್ತಾಕರ್ಷಕಗಳಾಗಿ ವಿರಾಜಿಸುತ್ತಿವೆ. ಈ ರೀತಿ ಅಲಂಕಾರ ಪ್ರಿಯನಾದ ನೀನು ಕೃಪೆಮಾಡಿ ನಿನ್ನ ಪಾದಾರವಿಂದಾಶ್ರಯುವನ್ನು ಕೊಟ್ಟು ನನ್ನನ್ನು ಉದ್ಧರಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಭಗವಂತನ ಮಧುರ ಕಟಾಕ್ಷವನ್ನೂ ಮಂದಸ್ಮಿತವನ್ನೂ ವರ್ಣಿಸಲಾಗಿದೆ.

|| ಶ್ಲೋ || ಕಾರುಣ್ಯಶೀತಲಕಟಾಕ್ಷನಿಷಿಕ್ತಭಕ್ತ
ಲೋಕಪ್ರಮೋದಭರಮಾತ್ಮನಿ ಸಂವಿಭಾವ್ಯ |
ಹರ್ಷಪ್ರಕರ್ಷಕೃತಮಂದವಿಲಾಸಹಾಸ !
ಶ್ರೀ ಶ್ರೀನಿವಾಸ ! ಮಮ ದೇಹಿ ಪದಾವಲಂಬಂ || ೩ ||

(ತಾತ್ಪರ್ಯ) ಎಲೈ ಪುಂಡರೀಕಾಕ್ಷನೇ ! ನಿನ್ನ ಸಂದರ್ಶನಕ್ಕಾಗಿ ಬಹು ಜನ ಭಕ್ತರು ನಿತ್ಯವೂ ನಿನ್ನ ಸನ್ನಿಧಾನಕ್ಕೆ ಅಹಮಹಮಿಕಯಾ ಬರುತ್ತಿರುವರು. ಅವರನ್ನೆಲ್ಲರನ್ನೂ ನೀನು ಕರುಣಾರ್ದ್ರಶೀತಲ ಕಟಾಕ್ಷದಿಂದ ನಿರೀಕ್ಷಿಸಿ ಅನುಗ್ರಹಿಸುತ್ತಿರುವೆ. ಹೀಗೆ ನಿನ್ನ ರಾಜೀವನಯನಾವಲೋಕನಕ್ಕೆ ಪಾತ್ರರಾಗಿ ಅಪರಿಮಿತವಾದ ಆನಂದಾತಿಶಯವನ್ನು ಹೊಂದಿ ಮೈಮರೆತು ಆನಂದಬಾಷ್ಪದಿಂದ ನೆನೆಸಲ್ಪಟ್ಟ ದೇಹವುಳ್ಳ ಆ ಭಕ್ತರ ಭಕ್ತಿಯ ಪರಾಕಾಷ್ಠೆಯನ್ನು ಪ್ರತ್ಯಕ್ಷವಾಗಿ ನೀನು ನೋಡುತ್ತಿರುವೆ. ಹೀಗೆ ನಿನ್ನ ಭಕ್ತೋತ್ತಮರ ಪ್ರೇಮಾತಿಶಯವನ್ನೂ ಅದರಿಂದ ಉತ್ಪನ್ನವಾದ ಆನಂದ ವಿಶೇಷದ ಕಾರ್ಯಗಳನ್ನೂ ನೋಡಿ ಮನಸ್ಸಿನಲ್ಲಿಯೇ ಹಿಗ್ಗುತ್ತಾ ಯಾವಾಗಲೂ ಅವುಗಳನ್ನು ಭಾವಿಸುತ್ತಿರುವೆ. ಈ ಪ್ರಕಾರ ಭಾವಿಸುವುದರಿಂದ ಉಂಟಾದ ಹರ್ಷಾತಿಶಯವನ್ನು ಮೃದುಮಂದಹಾಸವಿಲಾಸದಿಂದ ವ್ಯಕ್ತಪಡಿಸುವೆಯಲ್ಲವೇ ? ಇಂತಹ ಭಕ್ತಪ್ರಿಯನಾದ ಶ್ರೀನಿವಾಸದೇವನೇ ! ನೀನು ಕೃಪೆಮಾಡಿ ನಿನ್ನ ಪಾದಾವಲಂಬನವನ್ನಿತ್ತು ನನ್ನನ್ನು ರಕ್ಷಿಸು.

|| ಅವತಾರಿಕೆ || ಈ ಶ್ಲೋಕದಲ್ಲಿ ಶಂಖಚಕ್ರಗಳನ್ನು ಧರಿಸಿರುವ ಕೈಗಳನ್ನು ಸ್ತುತಿಸಲಾಗುತ್ತದೆ.

|| ಶ್ಲೋ || ಶಂಖಂಚ ಚಕ್ರಮಪಿ ಹಸ್ತವಿಭೂಷಣಾರ್ಥಂ
ಭಕ್ತಾವನಾರ್ಥಮಪಿ ಬಿಭ್ರದಮೋಘವೀರ್ಯಂ |
ಸ್ನೀಯಂ ಪರಾತ್ಪರತರತ್ವಮಹೋ ವಿವೃಣ್ವ
ಶ್ರೀ ಶ್ರೀನಿವಾಸ ! ಮಮದೇಹಿ ಪದಾವಲಂಬಂ || ೪ ||

(ತಾತ್ಪರ್ಯ) ಎಲೈ ಶ್ರೀನಾಥನೆ ! ಮೇಲಕ್ಕೆ ಎತ್ತಲ್ಪಟ್ಟಿರುವ ಎರಡು ಕೈಗಳಿಂದಲೂ ನೀನು ಧರಿಸಿರುವ ಶಂಖಚಕ್ರಗಳೆರಡೂ ನಿನ್ನ ಹಸ್ತಗಳಿಗೆ

ಅಲಂಕಾರಪ್ರಾಯವಾಗಿರುವುವು, ಮತ್ತು ಅವ್ಯಾಹತ ಶಕ್ತಿಯುಳ್ಳ ಇವೆರಡೂ ಶತ್ರುನಿರಾಸಕಗಳಾಗಿಯೂ ಭಕ್ತರಕ್ಷಕಗಳಾಗಿಯೂ ಪ್ರಕಾಶಿಸುತ್ತಿರುವುವು. ಹಾಗೆಯೇ ನಿನ್ನ ಪರಾತ್ಪರತರತ್ವದ ತೇಜಸ್ಸನ್ನು ಪ್ರಕಟಪಡಿಸುವುದಕ್ಕೆ ಈ ಶಂಖಚಕ್ರಗಳೇ ಅಸಾಧಾರಣ ಚಿಹ್ನೆಗಳಾಗಿರುತ್ತವೆ. ಇಂತಹ ಶಂಖಚಕ್ರ ಧಾರಿಯಾಗಿ ಭಕ್ತ ಪಕ್ಷಪಾತಿಯಾದ ನೀನು ಕೃಪೆಮಾಡಿ ನಿನ್ನ ಪದಾಶ್ರಯ ವನ್ನು ಕೊಟ್ಟು ನನ್ನನ್ನು ಕಾಪಾಡು.

॥ ಅವತಾರಿಕೆ ॥ ಇನ್ನು ಮುಂದಿನ ಎರಡು ಶ್ಲೋಕಗಳಲ್ಲಿ ಲಕ್ಷ್ಮೀನಿವಾಸ ಸ್ಥಾನವಾದ ವಕ್ಷಸ್ಥಲವು ಸ್ತುತಿಸಲ್ಪಡುತ್ತದೆ.

॥ ಶ್ಲೋ ॥ ವಕ್ಷಸ್ಥಲಾವಸಥವಾರಿಧಿಕನ್ಯಕಾಯಾಃ
ಕಾಯದ್ಯುತಿಃಸ್ಥಿರತರೇವ ತಟಿತ್ಪಯೋದೇ ।
ನಿತ್ಯಂ ಚಕಾಸ್ತಿ ತವ ಮೇಚಕವಿಗ್ರಹೇಽಸ್ಮಿನ್
ಶ್ರೀ ಶ್ರೀನಿವಾಸ ! ಮಮ ದೇಹಿ ಪದಾವಲಂಬಂ ॥ ೫ ॥

(ತಾತ್ಪರ್ಯ) ಎಲೈ ಶ್ರಿಯಃಪತಿಯೇ ! ಸಮುದ್ರರಾಜನ ಪುತ್ರಿಯಾದ ಲಕ್ಷ್ಮೀದೇವಿಯು ಯಾವಾಗಲೂ ನಿನ್ನ ವಕ್ಷಸ್ಥಲದಲ್ಲಿ ವಾಸಮಾಡುತ್ತಿರುವಳು "ಹಿರಣ್ಯವರ್ಣಾಂ ಹರಿಣೀಂ" ಎಂದು ಶ್ರೀ ಸೂಕ್ತದಲ್ಲಿ ವರ್ಣಿಸಿರುವಂತೆ ಚಿನ್ನದಂತೆ ಪ್ರಕಾಶಮಾನವಾದ ದೇಹಕಾಂತಿಯಿಂದ ಒಪ್ಪುತ್ತಿರುವ ಈ ಲಕ್ಷ್ಮೀದೇವಿಯು ನೀಲಮೇಘಶ್ಯಾಮನಾದ ನಿನ್ನ ವಕ್ಷಸ್ಥಲದಲ್ಲಿ ನೆಲೆಸಿರು ವುದರಿಂದ "ನೀಲತೋಯದಮಧ್ಯಸ್ಥಾವಿದ್ಯುಲ್ಲೇಖೇವ ಭಾಸ್ವರಾ" ಎಂದು ಪುರುಷಸೂಕ್ತದಲ್ಲಿ ವಿಶದಪಡಿಸಿರುವಂತೆ ಕಪ್ಪಾದ ಮೇಘದ ಮಧ್ಯದಲ್ಲಿ ತೋರಿಬರುವ ಮಿಂಚಿನ ಬಳ್ಳಿಯಂತೆ ಪ್ರಕಾಶಿಸುತ್ತಿರವಳು. ಆದರೆ ಮಿಂಚಿನ ಬಳ್ಳಿಯು ಅತ್ಯಲ್ಪಕಾಲದವರೆಗೆ ಪ್ರಕಾಶಿಸಿ ಕೂಡಲೇ ಮರೆಯಾಗುವುದು. ಈ ಶ್ರೀದೇವಿಯಾದರೋ "ಪಯೋದೇ ಸ್ಥಿರತರಾ ತಡಿದಿವ" ಎಂದು ಹೇಳಿ ಕಾರ್ಮೋಡದ ಮಧ್ಯದಲ್ಲಿ ಶಾಶ್ವತವಾಗಿ ನೆಲೆಸಿರುವ ಮಿಂಚಿನಂತೆ ನಿನ್ನ ಕಪ್ಪಾದ ವಕ್ಷಸ್ಥಲದಲ್ಲಿ ಹಿರಣ್ಯವರ್ಣ ದೇಹಕಾಂತಿಯಿಂದ ಯಾವಾಗಲೂ ಪ್ರಕಾಶಿಸುತ್ತಿರವಳು. ಹೀಗೆ ಭಕ್ತ ಸಂರಕ್ಷಣ ಕಾರ್ಯದಲ್ಲಿ ಪುರುಷಕಾರ

ಭೂತೆಯಾದ ಲಕ್ಷ್ಮಿಯನ್ನು ಸತತವೂ ವಕ್ಷಸ್ಥಲವಲ್ಲಿ ಧರಿಸಿಕೊಂಡಿರುವ ನೀನು ಕೃಪೆಮಾಡಿ ನಿನ್ನ ಪದಾವಲಂಬನವನ್ನು ಕೊಟ್ಟು ನನ್ನನ್ನು ರಕ್ಷಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿಯೂ ಶ್ರೀನಿವಾಸನ ವಕ್ಷಸ್ಥಲವೇ ಸ್ತೋತ್ರಮಾಡಲ್ಪಟ್ಟಿದೆ.

॥ ಶ್ಲೋ ॥ ಶ್ರೀವತ್ಸಕೌಸ್ತುಭ ಮಣಿಪ್ರವರಾಭಿರಾಮಂ ।
ಲಕ್ಷ್ಮೀವಿಹಾರಸುಖಯೋಗ್ಯ ಮುರೋ ವಿಶಾಲಂ ।
ಲಿಪ್ತಂಚ ಚಂದನರಸೈಃ ಪರಿದರ್ಶಯರ್ಮೇ
ಶ್ರೀ ಶ್ರೀನಿವಾಸ । ಮಮದೇಹಿ ಪದಾವಲಂಬಂ ॥ ೬ ॥

(ತಾತ್ಪರ್ಯ) ಎಲೈ ಶ್ರೀನಿವಾಸನೇ ! ನಿನ್ನ ವಕ್ಷಸ್ಥಲದ ಮಾಹತ್ವವು ಅಸಾಧಾರಣವಾದುದು. ಇದು ಶ್ರೀವತ್ಸವೆಂಬ ಶುಭಸೂಚಕವಾದ ದಿವ್ಯ ಚಿಹ್ನದಿಂದ (ಮಚ್ಚೆಯ ಗುರುತಿನಿಂದ) ಶೋಭಿಸುತ್ತಿರುವುದು. ಮಣಿ ಶ್ರೇಷ್ಠವಾದ ಕೌಸ್ತುಭ ರತ್ನದಿಂದಭೂಷಿಸಲ್ಪಟ್ಟಿರುವುದು. ಮತ್ತು ದಿವ್ಯ ಸುಗಂಧಚಂದನ ಲೇಪನದಿಂದ ಅಲಂಕೃತವಾಗಿ ಅತ್ಯಂತ ವಿಶಾಲವಾಗಿ ಕಂಗೊಳಿಸುತ್ತಿರುವುದು. ಆದುದರಿಂದಲೇ ಲಕ್ಷ್ಮೀದೇವಿಯ ವಿಹಾರಸೌಖ್ಯಕ್ಕೆ ಅನುಕೂಲವಾಗಿರುವುದು. ಇಂತಹ ನಿನ್ನ ಮನೋಹರವಾದ ವಕ್ಷಸ್ಥಲದ ದರ್ಶನವನ್ನು ಅನುಗ್ರಹಿಸಿಕೊಟ್ಟು ನಿನ್ನ ಪಾದಾವಲಂಬನವನ್ನು ನನಗೆ ಕರುಣಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ತೋಳ್ಬಳೆಗಳ ಸ್ಥಾನದಲ್ಲಿ ಸರ್ಪಗಳನ್ನು ಧರಿಸಿಕೊಂಡಿರುವ ಅಲಂಕಾರವು ಹೊಗಳಲ್ಪಟ್ಟಿದೆ.

॥ ಶ್ಲೋ ॥ ಸ್ಫೀತಶಾತಿದೀರ್ಘವಿಲಸದ್ಭುಜಭೂಷಣಾರ್ಥಂ
ಕೇಯೂರವತ್ತ್ವತಫಣೌ ಫಣಿನೌ ದಧಾನಃ ।
ತ್ವಂ ಸರ್ಪಭೂಷಣ ಇಹಾಸಿ ವೃಷಾದ್ರಿಶೃಂಗೇ
ಶ್ರೀ ಶ್ರೀನಿವಾಸ ಮಮ ದೇಹಿ ಪದಾವಲಂಬಂ ॥ ೭ ॥

(ತಾತ್ಪರ್ಯ) ವೃಷಾದ್ರಿ ನಿವಾಸಿಯಾದ ಎಲೈ ಶ್ರೀನಿವಾಸನೇ ! ಅತ್ಯಂತ

Funding: Tattva Heritage Foundation,Kolkata. Digitization: eGangotri.



ಪರಿಪುಷ್ಟಗಳಾಗಿಯೂ ದೀರ್ಘವಾಗಿಯೂ ಮನೋಹರಗಳಾಗಿಯೂ ಕಂಗೊಳಿಸುತ್ತಿರುವ ನಿನ್ನ ಮುಂಭಾಗದ ಎರಡು ತೋಳುಗಳಿಗೂ ನೀನು ಬಿಚ್ಚಿದ ಹೆಡೆಗಳನ್ನುಳ್ಳ ಸ್ವರ್ಣಮಯವಾದ ಎರಡು ಸರ್ಪಗಳನ್ನೇ ತೋಳ್ಬಳೆಗಳನ್ನಾಗಿ ಧರಿಸಿಕೊಂಡಿರುವೆ. ಈ ರೀತಿಯಾದ ಸರ್ಪ ಭೂಷಣವು ನಿನ್ನ ದಿವ್ಯ ಮಂಗಳ ವಿಗ್ರಹಕ್ಕೆ ಅಪೂರ್ವ ಕಾಂತಿಯನ್ನುಂಟುಮಾಡುತ್ತಿದೆ ಮತ್ತು ಸರ್ಪ ಭೂಷಣನೆಂಬ ಖ್ಯಾತಿಯನ್ನೂ ಹರಡುತ್ತಿದೆ. ಇಂತಹ ವಿಚಿತ್ರಾಲಂಕಾರ ಪ್ರಿಯನಾದ ಪರಮಾತ್ಮನೇ ! ನೀನು ಕೃಪೆಮಾಡಿ ನಿನ್ನ ಪಾದಕಮಲಗಳ ಆಶ್ರಯವನ್ನು ನನಗಿತ್ತು ಸಂರಕ್ಷಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಕೆಳಮುಖವಾದ ಬಲಗೈಯಿಂದ ತನ್ನ ಪಾದಗಳನ್ನು ತೋರಿಸುತ್ತಿರುವ ವಿಚಾರವು ಸ್ತುತಿಸಲ್ಪಟ್ಟಿರುತ್ತದೆ.

॥ ಶ್ಲೋ ॥ ಪಾದೌ ಸಮಾಶ್ರಯತ ಮೋಕ್ಷಸುಖಪ್ರದೌಮೇ
ಮರ್ತ್ಯಾಃ ಇತೀಹ ಸತತಂ ಕರಮುದ್ರಯಾ ತ್ವಂ ।
ಸಂದರ್ಶಯಸ್ಯಖಿಲ ಭಕ್ತಜನಾಯ ತಸ್ಮಾತ್
ಶ್ರೀ ಶ್ರೀನಿವಾಸ ! ಮಮ ದೇಹಿ ಪದಾವಲಂಬಂ ॥ ೮ ॥

(ತಾತ್ಪರ್ಯ) ಎಲೈ ಶ್ರೀನಿವಾಸನೇ ! ನೀನು ಕೃಷ್ಣಾವತಾರವನ್ನು ಪರಿಗ್ರಹಿಸಿದ್ದಾಗ ನಿನ್ನ ಸ್ನೇಹಿತನಾದ ಅರ್ಜುನನು ತನ್ನ ಶತ್ರುಗಳಾದ ದುರ್ಯೋಧನಾದಿಗಳನ್ನು ಯುದ್ಧದಲ್ಲಿ ಸಂಹರಿಸುವುದಾಗಿ ಮೊದಲು ಸಂಕಲ್ಪಿಸಿದ್ದನು. ಆಮೇಲೆ ಯುದ್ಧಕ್ಕೆ ಸಿದ್ಧರಾಗಿ ಬಂದ ಶತ್ರು ಸೈನ್ಯದಲ್ಲಿರುವ ಸಮಸ್ತರನ್ನೂ ನೋಡಿ ಅವರೆಲ್ಲರೂ ತನ್ನ ಬಂಧುಮಿತ್ರರೇ ಆಗಿರುವುದನ್ನು ಕಂಡು ದಯಾಮಯನಾಗಿ ಯುದ್ಧಪರಾಙ್ಮುಖನಾದನು ಆಗ ಅವನಿಗೆ ವಿವೇಕ ಹೇಳುವವ್ಯಾಜದಿಂದ ನೀನು ಗೀತೋಪನಿಷತ್ತನ್ನು ಉಪದೇಶಿಸುತ್ತಾ ಕಡೆಯಲ್ಲಿ ಸಕಲ ಧರ್ಮ ತತ್ವಸಾರವಾದ "ಸರ್ವಧರ್ಮಾ‌ನ್ ಪರಿತ್ಯಜ್ಯಮಾಮೇಕಂ ಶರಣಂವ್ರಜ । ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥" ಎಂದು ಈ ಶ್ಲೋಕವನ್ನು ಹೇಳಿ "ಪರಾತ್ಪರನೂ ಸರ್ವಶಕ್ತನೂ ಸರ್ವಜಗತ್ಕಾರಣಭೂತನೂ ಆದ ನನ್ನನ್ನೇ ಆಶ್ರಯಿಸು ನಿನ್ನ

ಸಮಸ್ತ ಪಾಪಗಳನ್ನೂ ನಾನು ಹೋಗಲಾಡಿಸಿ, ನಿನಗೆ ಮೋಕ್ಷ ಸಾಮ್ರಾಜ್ಯವನ್ನೂ ಕೂಡ ಕರುಣಿಸುವೆನು. ಚಿಂತಿಸಬೇಡ" ಎಂದು ಹೇಳಿ ಅರ್ಜುನನನ್ನು ಸಂತೈಸಿದೆಯಷ್ಟೆ ? ಆದರೆ ಆ ಸಂದರ್ಭದಲ್ಲಿ ಚೇತನರು ನಿನ್ನಲ್ಲಿ ಶರಣವರಣವನ್ನು ಮಾಡುವ ಕ್ರಮವನ್ನು ವ್ಯಕ್ತವಾಗಿ ವಿವರಿಸಿ ತೋರಿಸಿರಲಿಲ್ಲ. ಈ ನ್ಯೂನತೆಯನ್ನು ಪರಿಹರಿಸುವುದಕ್ಕಾಗಿಯೋ ಎಂಬಂತೆ ಈಗ ನೀನು ರೇಖಾರೂಪದಲ್ಲಿರುವ ಶಂಖಚಕ್ರಸರೋರುಹಾದಿ ದಿವ್ಯ ಲಕ್ಷಣಗಳಿಂದ ಒಪ್ಪುತ್ತಾ ಅತ್ಯಂತ ಕೋಮಲವಾಗಿ ಕಂಗೊಳಿಸುತ್ತಿರುವ ನಿನ್ನ ಬಲಗೈಯಿಂದ ನಿನ್ನ ಪಾದಕಮಲಗಳನ್ನು ತೋರಿಸುತ್ತಾ "ಜನನ ಮರಣಗಳಿಗೆ ಗುರಿಯಾಗಿರುವ ಎಲೈ ಚೇತನರೇ ! ಮೋಕ್ಷ ಸುಖ ಪರ್ಯಂತವಾದ ಸಮಸ್ತ ಶ್ರೇಯಸ್ಸುಗಳನ್ನೂ ಕೊಡತಕ್ಕ ಈ ನನ್ನ ಪಾದಕಮಲಗಳೆರಡನ್ನೂ ಅನನ್ಯ ಭಾವದಿಂದ ಆಶ್ರಯಿಸಿರಿ. ಈ ಪಾದಗಳೇ ನಿಮಗೆ ಪರಮಪ್ರಾಪ್ಯವು, ಇವುಗಳೇ ನಿಮಗೆ ಉತ್ತಾರಕಗಳು" ಎಂದು ಸ್ಪಷ್ಟವಾಗಿ ಸಮಸ್ತ ಭಕ್ತರಿಗೂ ಕರಮುದ್ರೆಯಿಂದ ಹೇಳುತ್ತಿರುವೆಯಲ್ಲವೆ ಆದುದರಿಂದಲೇ ನೀನು ಅಜ್ಞನಾದ ನನ್ನಲ್ಲಿ ಕೃಪೆಮಾಡಿ ನಿನ್ನ ಈ ಪಾದಗಳ ಅವಲಂಬನವನ್ನಿತ್ತು ಉದ್ಧರಿಸು.

|| ಅವತಾರಿಕೆ || ಈ ಶ್ಲೋಕದಲ್ಲಿ ಮಂಡಿಯುವರೆವಿಗೂ ನೀಡಿಕೊಂಡಿರುವ ಎಡಗೈಯನ್ನು ವರ್ಣಿಸಲಾಗುತ್ತಿದೆ.

|| ಶ್ಲೋ || ಆಜಾನುಲಂಬಿತಭುಜೋ ಭುಜಗಾದ್ರಿನಾಥ !
ಸಂಕುಂಚಿತಾತ್ಮಕರಮುದ್ರಿಕಯಾ ಬ್ರವೀಷಿ ।
ಸಂಸಾರಸಿಂಧುರಿಹ ವಃಕಿಲ ಜಾನುದಘ್ನ
ಇತ್ಥಂ ತತೋಽದ್ಯ ಮಮ ದೇಹಿ ಪದಾವಲಂಬಂ || ೯ ||

(ತಾತ್ಪರ್ಯ) ಭುಜಗಾಚಲಾಧಿಪತಿಯಾದ ಎಲೈ ಶ್ರೀನಿವಾಸನೇ ! ಜಾನು ಪ್ರದೇಶದವರೆಗೂ ಉದ್ದವಾಗಿ ನೀಡಲ್ಪಟ್ಟಿರುವ ನಿನ್ನ ಎಡತೋಳು ಮಂಡಿಯ ಮೇಲೆ ಸ್ವಲ್ಪ ಬಗ್ಗಿಸಿ ಇರಿಸಿಕೊಂಡಿರುವ ಹಸ್ತವುಳ್ಳದ್ದಾಗಿದೆ. ನೀನು ಹೀಗೆ ಕೈಯನ್ನು ಇಟ್ಟುಕೊಂಡಿರುವುದರ ಭಾವಾರ್ಥವೇನೆಂದರೆ ?

ನೀನು ನಿನ್ನ ಭಕ್ತರನ್ನು ಕುರಿತು "ಎಲೈ ಪ್ರಿಯತಮರಾದ ಭಕ್ತರೇ ! ನಾನು ಹೇಳಿದಂತೆ ನನ್ನ ಪಾದಗಳನ್ನು ದೃಢಭಾವದಿಂದ ಆಶ್ರಯಿಸಿದ್ದೇ ಆದರೆ ಆಗ ನಿಮಗೆ ಅಗಾಧವಾದ ಸಂಸಾರ ಸಾಗರವು ಕೂಡ ಮೊಣಕಾಲಿನ ಮಟ್ಟಕ್ಕೆ ಇಳಿದು ಹೋಗುವುದು. ಎಂದರೆ ಸಂಸಾರಸಾಗರವನ್ನು ನೀವು ಸುಲಭ ವಾಗಿ ದಾಟಬಲ್ಲಿರಿ ಎಂಬ ಅರ್ಥವನ್ನು ಮಂಡಿಯ ಸಮೀಪದಲ್ಲಿ ಬಗ್ಗಿಸಿ ಇರಿಸಿಕೊಂಡಿರುವ ಹಸ್ತಮುದ್ರಿಕೆಯಿಂದ ಸಾರುತ್ತಿರುವೆಯಲ್ಲವೇ ? ಅಂತಹ ಭವಸಾಗರೋತ್ತಾರಕನಾದ ಸ್ವಾಮಿಯೇ ! ನೀನು ಕೃಪೆಮಾಡಿ ನಿನ್ನ ಪದಾ ವಲಂಬನವನ್ನು ನನಗೆ ಕೊಟ್ಟು ನನ್ನನ್ನು ಪರಿಪಾಲಿಸು.

ಶ್ರೀನಿವಾಸಸ್ವಾಮಿಯು ತನ್ನ ಬಲಗೈಯಿಂದ ಪಾದವನ್ನು ತೋರಿಸು ತ್ತಿರುವುದರ ಭಾವಾರ್ಥವು "ಈ ನನ್ನ ಪಾದಗಳನ್ನು ಆಶ್ರಯಿಸಿರಿ" ಎಂದು ಭಕ್ತರಿಗೆ ತಿಳಿಸುತ್ತಿರುವುದಾಗಿಯೂ ಮಂಡಿಯ ಮೇಲೆ ಇರಿಸಿಕೊಂಡಿರುವ ಎಡಗೈಯಿಂದ ತಿಳಿದು ಬರುವ ಭಾವವು "ನನ್ನ ಈ ಪಾದಗಳನ್ನು ಆಶ್ರಯಿ ಸಿದವರಿಗೆ ಭವಸಾಗರವು ಮೊಣಕಾಲಿನ ಮಟ್ಟದಷ್ಟು ಕಡಿಮೆಯಾಗಿ ಇಳಿದು ಹೋಗುವುದು" ಎಂಬುವ ಅರ್ಥವನ್ನು ಸೂಚಿಸುತ್ತಲೂ ಇದೆಯೆಂದೂ ವರ್ಣಿಸಿರುವುದಕ್ಕೆ ಪ್ರಮಾಣ ವಚನವಾದ ಶ್ರೀ ವೇಂಕಟೇಶ ಸಹಸ್ರನಾಮದ ಧ್ಯಾನ ಶ್ಲೋಕವೇ ಆಧಾರ ಭೂತವಾಗಿದೆ.

(ಧ್ಯಾನ ಶ್ಲೋಕ)

ಊರ್ಧ್ವೌ ಹಸ್ತೌಯದೀಯೌ ಸುರರಿಪುದಳನೇ
ಬಿಭ್ರತೌ ಶಂಖಚಕ್ರೇ ಸೇವ್ಯಾವಂಘ್ರೀ ಸ್ವಕೀಯಾ
ವಭಿದಧದಧರೋ ದಕ್ಷಿಣೋಯಸ್ಯಪಾಣಿಃ ।
ತಾವನ್ಮಾತ್ರಂ ಭವಾಬ್ಧಿಂಗಮಯತಿ ಭಜತಾ
ಮೂರುಗೋ ವಾಮಪಾಣಿಃ । ಶ್ರೀವತ್ಸಾಂಕಶ್ಚ
ಲಕ್ಷ್ಮೀರ್ಯದುರಸಿ ಲಸತಸ್ತಂ ಭಜೇ ವೇಂಕಟೇಶಂ ॥

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಪಾದಕಮಲದಿಂದ ಹಿಡಿದು ಕಿರೀಟ ಪರ್ಯಂತವಾದ ಶ್ರೀನಿವಾಸನ ದಿವ್ಯ ಮಂಗಳ ವಿಗ್ರಹವು ವರ್ಣಿಸಲ್ಪಟ್ಟಿದೆ.

॥ ಶ್ಲೋ ॥ ಆಪಾದಮಸ್ತಕಮನರ್ಘಮನೋಜ್ಞರತ್ನ
ಭೂಷಾಭಿರಾಮ ಘನಮೇಚಕಕಾಯಕಾಂತೇ ! ।
ಸರ್ವೇತ್ವರತ್ವಕಥನೋಚ್ಚಕಿರೀಟಪಾಳೀ !
ಶ್ರೀ ಶ್ರೀನಿವಾಸ ! ಮಮ ದೇಹಿ ಪದಾವಲಂಬಂ ॥ ೧೦ ॥

(ತಾತ್ಪರ್ಯ) ಎಲೈ ಶ್ರೀನಿವಾಸನೇ ! ಪಾದಕಮಲದಿಂದ ತೊಡಗಿ ಶಿರಸ್ಸನ್ನು ವ್ಯಾಪಿಸಿರುವಂತೆ ಶ್ರೇಷ್ಠವಾದ ನಾನಾ ರತ್ನಗಳಿಂದ ರಚಿಸಲ್ಪಟ್ಟಿರುವ ಬಗೆ ಬಗೆಯಾದ ದಿವ್ಯಾಭರಣಗಳನ್ನು ಧರಿಸಿಕೊಂಡಿರುವೆ. ಇದರಿಂದ ನೀಲಮೇಘ ಶ್ಯಾಮನಾದ ನಿನ್ನ ದೇಹಕ್ಕೆ ಅಪೂರ್ವ ಕಾಂತಿಯುನ್ನುಂಟುಮಾಡುತ್ತಿದೆ. ಮತ್ತು ನಿನ್ನ ಶಿರಸ್ಸಿನಲ್ಲಿ ಪ್ರಕಾಶಿಸುತ್ತಿರುವ ಅತ್ಯುನ್ನತವಾದ ರತ್ನಕಿರೀಟವು ನಿನ್ನ ಸರ್ವ ಶ್ರೇಷ್ಠತೆಯನ್ನೂ ಸರ್ವೇಶ್ವರತ್ವವನ್ನೂ ವ್ಯಕ್ತಪಡಿಸುವಂತೆ ಕಂಗೊಳಿಸುತ್ತಿದೆ. ಇಂತಹ ಸರ್ವೇಶ್ವರನಾದ ನೀನು ನನ್ನಲ್ಲಿ ಕೃಪೆಮಾಡಿ ನಿನ್ನ ಪಾದಾವಲಂಬನವನ್ನು ಅನುಗ್ರಹಿಸಿಕೊಟ್ಟು ನನ್ನನ್ನು ಸಲಹು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಪೀತಾಂಬರ ಪುಷ್ಪಮಾಲಿಕೆ ದಿವ್ಯಾಭರಣಗಳು ಇವುಗಳನ್ನೆಲ್ಲಾ ಧರಿಸಿಕೊಂಡು ಸಮಸ್ತ ಭಕ್ತಜನರ ಕಣ್ಮನಗಳನ್ನೂ ಆಕರ್ಷಿಸುತ್ತಿರುವ ಅಂಶವು ವರ್ಣಿಸಲ್ಪಟ್ಟಿದೆ.

॥ ಶ್ಲೋ ॥ ಪೀತಾಂಬರೇಣಚ ಸುಗಂಧಿ ಸುಮಾವಳೀನಾಂ
ಮಾಲ್ಯೈಶ್ಚ ರತ್ನಮಯ ದಿವ್ಯವಿಭೂಷಣೈಶ್ಚ ।
ಸಂಪ್ರೇಕ್ಷಕಾಕ್ಷಿ ಹೃದಯಾಪಹೃತಿಪ್ರವೀಣ !
ಶ್ರೀ ಶ್ರೀನಿವಾಸ ಮಮದೇಹಿ ಪದಾವಲಂಬಂ ! ॥ ೧೧ ॥

(ತಾತ್ಪರ್ಯ) ಎಲೈ ಪುರುಷೋತ್ತಮನೇ ! ನಿನ್ನ ಸೌಂದರ್ಯವನ್ನು ಮತ್ತಷ್ಟು ವೃದ್ಧಿಗೊಳಿಸುವುದಕ್ಕೋ ಅಥವಾ ಅವ್ಯಾಜಸುಂದರವಾದ ನಿನ್ನ ದಿವ್ಯ ಮಂಗಳ ವಿಗ್ರಹಕ್ಕೆ ದೃಷ್ಟಿ ತಾಕದಂತೆ ಮುಚ್ಚಿಡುವುದಕ್ಕೋ ನೀನು ಧರಿಸಿಕೊಂಡಿರುವ ಪೀತಾಂಬರವೂ ಒಳ್ಳೆಯ ಸುವಾಸನೆಯನ್ನು ಬೀರುತ್ತಿರುವ ಬಗೆ ಬಗೆಯಾದ ಪುಷ್ಪಗಳಿಂದ ವಿರಚಿತವಾದ ಮಾಲಿಕೆಗಳೂ ಮತ್ತು ರತ್ನ

ಖಚಿತಗಳಾದ ದಿವ್ಯಾಭರಣಗಳೂ ಸಹ ನಿನ್ನ ದರ್ಶನಕ್ಕಾಗಿ ಬಂದಿರುವ ಸಮಸ್ತ ಜನಗಳ ಕಣ್ಣುಗಳನ್ನೂ ಮನಸ್ಸನ್ನೂ ಆಕರ್ಷಿಸಿ ಮೋಹಗೊಳಿಸುತ್ತಿವೆ. ಇಂತಹ ಸರ್ವಜನ ಮನಸ್ಸಮಾಕರ್ಷಣದಲ್ಲಿ ನಿಪುಣನಾದ ಶ್ರೀನಿವಾಸ ಸ್ವಾಮಿಯೇ! ನಿನ್ನ ಪಾದಕಮಲಗಳ ಆಶ್ರಯವನ್ನು ಕೊಟ್ಟು ನನ್ನನ್ನು ಸಂರಕ್ಷಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಕೇವಲ ವಜ್ರಮಯವಾದ ಆಭರಣಗಳನ್ನು ಧರಿಸಿಕೊಂಡಿರುವ ಪರಮಾತ್ಮನನ್ನು ವರ್ಣಿಸಲಾಗುತ್ತದೆ.

॥ ಶ್ಲೋ ॥ ಸರ್ವತ್ರ ಹೀರಮಯದೀಪ್ರವಿಭೂಷಣೈಸ್ತೈಃ
ಸ್ತ್ವನ್ನೀಲಗಾತ್ರಮಖಿಲಂ ಸಮಲಂಕೃತಂ ಯತ್ ॥
ದರ್ಶಕ್ಷಪೋಡುನಭಸಃ ಸದೃಶಂ ವಿಭಾತಿ
ಶ್ರೀ ಶ್ರೀನಿವಾಸ ಮಮ ದೇಹಿ ಪದಾವಲಂಬಂ ॥ ೧೨ ॥

(ತಾತ್ಪರ್ಯ) ಎಲೈ ಶ್ರಿಯಃಪತಿಯೇ ! ಬಗೆ ಬಗೆಯಾದ ವಿಶೇಷಾಭರಣಗಳು ನಿನಗೆ ಹೇರಳವಾಗಿರುತ್ತಿವೆ. ಅವುಗಳಲ್ಲಿ ಅತ್ಯಂತ ಪ್ರಕಾಶಮಾನವಾಗಿರುವ ವಜ್ರಗಳಿಂದಲೇ ರಚಿಸಲ್ಪಟ್ಟ ಕಿರೀಟ ಕುಂಡಲಾದಿ ವಜ್ರಮಯವಾದ ಆಭರಣಗಳನ್ನು ನೀನು ಧರಿಸಿಕೊಂಡಿರುವಾಗ ನಿನ್ನ ದರ್ಶನವು ಮತ್ತಷ್ಟು ಆಕರ್ಷಕವಾಗಿ ಕಂಗೊಳಿಸುತ್ತಿರುವುದು. ಹೀಗೆ ವಜ್ರಾಭರಣಭೂಷಿತನಾದ ನೀನು ಅಮಾವಾಸ್ಯೆಯ ರಾತ್ರಿಯಲ್ಲಿ ಪ್ರಕಾಶಿಸುತ್ತಲಿರುವ ನಕ್ಷತ್ರರಾಶಿಗಳಿಂದ ಪರಿಪೂರ್ಣವಾದ ಆಕಾಶದೋಪಾದಿಯಲ್ಲಿ ಕಾಣಲ್ಪಡುವೆ. ಹೀಗೆ ಭಕ್ತರ ಆಕರ್ಷಣೆಗಾಗಿ ವಿಚಿತ್ರಾಭರಣಗಳನ್ನು ಧರಿಸಿಕೊಳ್ಳುವ ಶ್ರೀನಿವಾಸಮೂರ್ತಿಯೇ ! ನೀನು ನಿನ್ನ ಪದ ಪದ್ಮಾಶ್ರಯವನ್ನು ಅನುಗ್ರಹಿಸಿಕೊಟ್ಟು ನನ್ನನ್ನು ಉಜ್ಜೀವಿಸುವಂತೆ ಮಾಡು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಶ್ರೀನಿವಾಸನ ಮುಖಕಮಲವೂ ಕೂಡ ಸ್ವಾಮಿಯ ಪಾದಗಳನ್ನೇ ಆಶ್ರಯಿಸಿರಿ ಎಂದು ಭಕ್ತಾದಿಗಳಿಗೆ ಸೂಚಿಸುತ್ತಿದೆಯೋ ಎಂದು ತೋರುವ ಭಾವವು ವರ್ಣಿಸಲ್ಪಟ್ಟಿರುತ್ತದೆ.

॥ ಶ್ಲೋ ॥ ಫುಲ್ಲಾಬ್ಜನೇತ್ರ ಮನತಿಸ್ಮಿತವುನ್ನಸಾಗ್ರಂ
ಸುಭ್ರೂಶ್ಚರತ್ನಮಕುಟಂ ತಕಫಾಲಮೀಕ್ಷ್ಯಂ ।
ಪಾದೌಶ್ರಯೇತಿ ವದತೀವ ಮುಖಾಂಬುಜಂತೇ
ತದ್ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೧೩ ॥

(ತಾತ್ಪರ್ಯ) ಎಲೈ ಶ್ರೀನಿವಾಸನೇ! ನಿನ್ನ ಒಂದೊಂದು ಅವಯವವೂ ಆನಂದದಾಯಕವಾಗಿ ಭವ್ಯರೂಪದಿಂದ ಬೆಳಗುತ್ತಿರುವುದು. ಅದರಲ್ಲಿಯೂ ನಿನ್ನ ಮುಖಕಮಲವು ಆಗತಾನೇ ಅರಳಿರುವ ಪುಂಡರೀಕದಂತೆ ಮನೋಹರವಾದ ಕಣ್ಣುಗಳನ್ನುಳ್ಳದ್ದಾಗಿಯೂ ಮಂದಸ್ಮಿತದಿಂದ ಕೂಡಿರುವ ತುಟಿಗಳಿಂದ ಕಂಗೊಳಿಸುತ್ತಲೂ ಸ್ವಲ್ಪ ಮೇಲ್ಮುಖವಾದ ಅಗ್ರಭಾಗವುಳ್ಳ ದೀರ್ಘವಾದ ಮೂಗಿನಿಂದ ಒಪ್ಪುತ್ತಲೂ ಬಿಲ್ಲಿನಂತೆ ಬಾಗಿ ಮನೋಹರಗಳಾದ ಹುಬ್ಬುಗಳಿಂದ ಪ್ರಕಾಶಿಸುತ್ತಲೂ ದೀರ್ಘವಾದ ರತ್ನಮಯ ಕಿರೀಟದಿಂದ ರಾಜಿಸುವ ಶಿರಸ್ಸುಳ್ಳದ್ದಾಗಿಯೂ ವಿಸ್ತಾರವಾದ ಹಣೆಯುಳ್ಳದ್ದಾಗಿಯೂ ಸರ್ವ ಜನರನ್ನೂ ಮುಗ್ಧರನ್ನಾಗಿ ಮಾಡುವ ಅಪರಿಮಿತ ಸೌಂದರ್ಯದಿಂದ ಪೂರ್ಣವಾಗಿ ಶೋಭಿಸುತ್ತಿರುವುದು. ಆದುದರಿಂದ ನಿನ್ನ ದರ್ಶನಕ್ಕೆ ಬರುವ ಸಮಸ್ತ ಭಕ್ತರೂ ಇಂತಹ ಮುಖ ಕಮಲದಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ತದೇಕದರ್ಶನ ಪರರಾಗಿ ಆಗುವರು. ಆ ಸಂದರ್ಭದಲ್ಲಿ ಇಂತಹ ಮುಗ್ಧ ಭಕ್ತರಿಗೆ ಎಚ್ಚರಿಕೆಯನ್ನಿತ್ತು ಜ್ಞಾನೋದಯವನ್ನುಂಟುಮಾಡುವುದಕ್ಕಾಗಿ ನಿನ್ನ ಮುಖ ಮಂಡಲವು ಮಂದಸ್ಮಿತಪೂರ್ವಕವಾಗಿ "ನನ್ನನ್ನು ದರ್ಶನ ಮಾಡುವುದಕ್ಕಿಂತಲೂ ಮೊದಲು ಈ ಪಾದಕಮಲಗಳನ್ನು ದರ್ಶನ ಮಾಡಿರಿ ಅದೀಗ ಪ್ರಥಮ ಸಂದರ್ಶನೀಯವು. ಅದೇ ಪ್ರಥಮಾಶ್ರಯಣೀಯವು ಪ್ರಥಮತಃ ಪಾದದರ್ಶನವೇ ಸತ್ಸಂಪ್ರದಾಯವು" ಎಂದು ಉಪದೇಶಿಸುತ್ತಿರುವುದೋ ಎಂಬಂತೆ ಪ್ರಕಾಶಿಸುತ್ತಿದೆ. ಆದುದರಿಂದ ಎಲೈ ವೇಂಕಟೇಶನೇ ಅಂತಹ ಪಾದಕಮಲಗಳ ಆಶ್ರಯವನ್ನು ನನಗಿತ್ತು ನನ್ನನ್ನು ಪರಿಪಾಲಿಸು.

॥ ಅವತಾರಿಕೆ ॥ ಇನ್ನು ಮುಂದಿನ ಮೂರು ಶ್ಲೋಕಗಳಲ್ಲಿ ಭಗವಂತನ ಪಾದಕಮಲಗಳನ್ನು ಸ್ತುತಿಸಲಾಗುತ್ತದೆ.

|| ಶ್ಲೋ || ವಜ್ರಧ್ವಜಾಂಕುಶಸರೋರುಹಶಂಖಚಕ್ರ
ಕಲ್ಪದ್ರುಲಾಂಛಿತಪದಾಂಬುಜಲಬ್ಧಕೀರ್ತೇ ! |
ತ್ರೈವಿಕ್ರಮಕ್ರಮವಿನಮ್ರಸಮಸ್ತಲೋಕ !
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ || ೧೪ ||

(ತಾತ್ಪರ್ಯ) ತ್ರಿವಿಕ್ರಮರೂಪಿಯಾಗಿದ್ದ ಎಲೈ ಶ್ರೀನಿವಾಸದೇವನೇ ! ನಿನ್ನ ಪದಕಮಲಗಳೇ ಪ್ರಥಮಾಶ್ರಯಣೀಯಗಳೆಂಬುವುದಕ್ಕೆ ಈ ಪಾದಾರವಿಂದ ಗಳಲ್ಲಿ ಅಂತಹ ಅದ್ಭುತ ಮಹತ್ವವೇನಿರುವುದೆಂದರೆ ? ನಿನ್ನ ಅಂಗಾಲುಗಳಲ್ಲಿ ರೇಖಾರೂಪದಿಂದ ವಜ್ರಾಯುಧ, ಧ್ವಜ, ಅಂಕುಶ, ಕಮಲ, ಶಂಖ, ಚಕ್ರ ಕಲ್ಪತರು ಇವುಗಳೆಲ್ಲಾ ಪ್ರಕಾಶಿಸುತ್ತಿವೆ. ಇಂತಹ ಸುಲಕ್ಷಣಗಳಿಂದ ರಾಜಿ ಸುತ್ತಿರುವ ಚರಣ ಕಮಲಗಳನ್ನು ನೀನು ಹೊಂದಿರುವುದರಿಂದಲೇ ನಿನ್ನ ಸರ್ವೇಶ್ವರತ್ವವೂ, ಸರ್ವೋತ್ತಮತ್ವವೂ, ಸರ್ವಶಕ್ತತೆಯೂ ಲೋಕದಲ್ಲಿ ಪ್ರಸಿದ್ಧವಾಗಿದೆ. ಇಂತಹ ಪದಕಮಲಗಳ ಪ್ರಭಾವದಿಂದಲೇ ನೀನು ಪುರು ಷೋತ್ತಮನೆಂಬ ಯಶಸ್ಸನ್ನು ಪಡೆದಿರುವೆ. ತ್ರಿವಿಕ್ರಮಾವತಾರದಲ್ಲಿ ಸಮಸ್ತ ಲೋಕಗಳನ್ನೂ ಅಳೆದುದು ನಿನ್ನ ಈ ಪಾದಕಮಲಗಳೇ.. ಮತ್ತು ಸಮಸ್ತ ಚೇತನಾಚೇತನಗಳೂ ನಿನ್ನ ಈ ಪಾದಾಕ್ರಾಂತಗಳಾಗಿ ಇವುಗಳ ಅಡಿಯಲ್ಲಿ ಅಡಗಿದ್ದುವು. ಆದುದರಿಂದ ನಿನ್ನ ಪಾದ ಪ್ರಭಾವವೇ ನಿನ್ನ ಮಹಿಮೆಗೂ ಕಾರಣಭೂತವಾಗಿದೆ. ಇಂತಹ ನಿನ್ನ ಪಾದಾವಲಂಬನವನ್ನು ನನಗೆ ಅನು ಗ್ರಹಿಸಿಕೊಟ್ಟು ನನ್ನನ್ನು ಸಂರಕ್ಷಿಸು.

|| ಅವತಾರಿಕೆ || ಈ ಶ್ಲೋಕದಲ್ಲಿಯೂ ವೇಂಕಟೇಶನ ಚರಣ ಕಮಲಗಳೇ ಸ್ತುತಿಸಲ್ಪಡುತ್ತವೆ.

|| ಶ್ಲೋ || ಬ್ರಹ್ಮಾದಯೋಽಪ್ಯಖಿಲದೇವಗಣಾಸ್ತ್ವದೀಯ
ಶ್ರೀಪಾದಪದ್ಮಮಹಿಮಾನಮವೇಕ್ಷ್ಯ ಭಕ್ತ್ಯಾ |
ತತ್ಪಾದದರ್ಶನಕೃತೇ ಪ್ರತಿಪಾಲಯಂತಿ
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ || ೧೫ ||

(ತಾತ್ಪರ್ಯ) ಬ್ರಹ್ಮರುದ್ರಾದಿ ದೇವೋತ್ತಮರು ಕೂಡ ನಿನ್ನ ಈ ಪದಕಮಲ ಗಳ ಅದ್ಭುತ ಮಹಿಮೆಯನ್ನು ಕಂಡು ಇವುಗಳನ್ನೇ ಪರಮ ಭಕ್ತಿಯಿಂದ

ಆರಾಧಿಸುತ್ತಿರುವರು. ಚತುರ್ಮುಖ ಬ್ರಹ್ಮನು ಊರ್ಧ್ವಲೋಕಾಕ್ರಮಣಕ್ಕಾಗಿ ಹೊರಟು ಬಂದಿದ್ದ ನಿನ್ನ ಒಂದು ಪಾದವನ್ನು ಪೂಜಿಸಿ ತನ್ನ ಕಮಂಡಲು ತೀರ್ಥದಿಂದ ಅಭಿಷೇಕಮಾಡಿ ಆ ಶ್ರೀಪಾದ ತೀರ್ಥವನ್ನು ತನ್ನ ಉಜ್ಜೀವನಾರ್ಥವಾಗಿ ಪರಿಗ್ರಹಿಸಿ ಪುನೀತನಾದನು. ಪಾರ್ವತೀಪತಿಯಾದ ಪರಮೇಶ್ವರನು ಕೂಡ ಗಂಗಾನದಿಯೆಂದು ಪ್ರಸಿದ್ಧವಾಗಿರುವ ನಿನ್ನ ಈ ಶ್ರೀಪಾದ ತೀರ್ಥವನ್ನೇ ಕಪರ್ದವೆಂಬ ತನ್ನ ಜಟಾಜೂಟದಲ್ಲಿ ಯಾವಾಗಲೂ ಧರಿಸಿಕೊಂಡಿರುವನು. ಇಂದ್ರಾದಿ ದೇವತೆಗಳು ನಿನ್ನ ಈ ಪಾದಕಮಲಗಳನ್ನು ಆಶ್ರಯಿಸಿ ತಮ್ಮ ಕಷ್ಟಗಳನ್ನೆಲ್ಲಾ ನಿವಾರಿಸಿಕೊಂಡಿರುವರು. ಇಂತಹ ಅದ್ಭುತ ಮಹಿಮೆಯುಳ್ಳ ಭವಚ್ಚರಣಾರವಿಂದಸಂದರ್ಶನಕ್ಕಾಗಿ ದೇವಾಧಿದೇವತೆಗಳೂ ಕೂಡ ಸತತವೂ ಕಾದುಕೊಂಡಿರುವರು. ಎಲೈ ಶ್ರೀನಿವಾಸ ಸ್ವಾಮಿಯೇ ! ನಿನ್ನ ಇಂತಹ ಪದಕಮಲಗಳ ಆಶ್ರಯವನ್ನು ಅತ್ಯಲ್ಪನಾದ ನನಗೂ ಕೊಟ್ಟು ನನ್ನನ್ನು ಉದ್ಧರಿಸು.

|| ಅವತಾರಿಕೆ || ಈ ಶ್ಲೋಕದಲ್ಲಿಯೂ ವೇಂಕಟೇಶನ ಪಾದಾರವಿಂದ ಸ್ತುತಿಯೇ ಮಾಡಲ್ಪಟ್ಟಿದೆ.

|| ಶ್ಲೋ || ಗೋಪೀಜನಸ್ತನತಟೇಷು ಬಲೀಂದ್ರಶೀರ್ಷೇ
ಕಾಳೀಯಮೂರ್ಧ್ನಿ ಸುಕೃತೌ ಶಕಟಾಸುರೇ ಚ ।
ಅಶ್ಮಾತ್ಮಯೋಷಿತಿ ರಮಾಕರಯೋಃ ಸ್ಥಿತಂ ಯತ್
ತತ್ತೇಪ್ರದರ್ಶ್ಯ ಮಮ ದೇಹಿ ಪದಾವಲಂಬಂ || ೧೬ ||

(ತಾತ್ಪರ್ಯ) ಎಲೈ ಮಹಾಮಹಿಮನಾದ ಮುಕುಂದನೇ ಉಪನಿಷತ್ತುಗಳು ಕೂಡ ನಿನ್ನ ಪಾದಕಮಲಗಳ ಮಹಿಮೆಯನ್ನು ವರ್ಣಿಸಲು ಅಶಕ್ತಗಳಾಗಿರುವಾಗ ಅಜ್ಞತಮನಾದ ನಾನು ಸ್ತೋತ್ರ ಮಾಡಲು ಹೊರಟಿರುವುದು ಪರಿಹಾಸ್ಯಾಸ್ಪದವೇ ಸರಿ. ಆದರೂ ಮನೋಭಾವನೆಯ ಉದ್ವೇಗದಿಂದ ಕೆಲವು ವಿಚಾರಗಳನ್ನು ಮಾತ್ರ ಇಲ್ಲಿ ಸ್ತುತಿಸಿ ನಿನ್ನ ಪಾದಕಮಲಗಳ ಪ್ರಭಾವವನ್ನು ಸ್ವಲ್ಪ ವರ್ಣಿಸಿರುತ್ತೇನೆ. ಎಲೈ ಶ್ರೀನಿವಾಸನೇ ! ಕೃಷ್ಣಾವತಾರದಲ್ಲಿ ನಿನ್ನ ವಿರಹ ತಾಪದಿಂದ ಸಂತಪ್ತರಾಗಿ ಬಾಡಿ ಬಳಲಿ ಮರಣೋನ್ಮುಖರಾಗಿದ್ದ

ಗೋಪಾಂಗನೆಯರನ್ನು ಸಂರಕ್ಷಿಸುವುದಕ್ಕಾಗಿ ಕೃಪೆಮಾಡಿ ನೀನು ಅವರಿಗೆ ನಿನ್ನ ದರ್ಶನವನ್ನು ಕೊಟ್ಟೆಯಷ್ಟೆ. ಆಗ ತಮ್ಮ ಸಮಸ್ತ ಸಂತಾಪನಿವಾರಣಾರ್ಥವಾಗಿ ಆ ಗೋಪಾಂಗನೆಯರು ಕಾಮಜ್ವರ ಸಂತಪ್ತವಾಗಿದ್ದ ತಮ್ಮ ಎದೆಗಳ ಮೇಲೆ ನಿನ್ನ ಈ ಎರಡು ಚರಣ ಸರೋಜಗಳನ್ನೂ ಇಟ್ಟುಕೊಂಡು ಬಿಗಿಯಾಗಿ ಆಲಂಗಿಸುವುದರ ಮೂಲಕ ತಮ್ಮ ಕಷ್ಟಗಳನ್ನೆಲ್ಲಾ ಹೋಗಲಾಡಿಸಿಕೊಂಡು ಸುಖ ಸಂತೋಷ ಸಾಗರದಲ್ಲಿ ಓಲಾಡಿದರು. ಹೀಗೆ ಗೋಪಾಂಗನೆಯರ ಸ್ತನತಟದಲ್ಲಿದ್ದು ಅವರ ಸಂತಾಪವನ್ನು ಪರಿಹರಿಸಿ ಅವರನ್ನು ಉದ್ಧರಿಸಿದ ಪಾದವಿದು. ಹಾಗೆಯೇ ಬಲಿಚಕ್ರವರ್ತಿಯ ತಲೆಯನ್ನು ಮೆಟ್ಟಿ ಪಾತಾಳಕ್ಕೆ ತುಳಿದು ಅವನನ್ನು ಪರಮ ಪವಿತ್ರನನ್ನಾಗಿಯೂ ಭಕ್ತೋತ್ತಮನನ್ನಾಗಿಯೂ ಮಾಡಿದ ಪಾದವಿದು. ಮತ್ತು ಕಾಳೀಯನೆಂಬ ಸರ್ಪರಾಜನ ಹೆಡೆಗಳ ಮೇಲೆ ನರ್ತನಮಾಡಿ ಅವನನ್ನು ಉದ್ಧರಿಸಿದ ಪಾದವಿದು. ಅಸುರನಾಗಿದ್ದರೂ ಸುಕೃತಶಾಲಿಯಾದ ಶಕಟಾಸುರನನ್ನು ಒದ್ದು ಅನುಗ್ರಹಿಸಿದ ಪಾದವಿದು. ಶಾಪಗ್ರಸ್ತಳಾಗಿದ್ದ ಅಹಲ್ಯೆಯನ್ನು ಸ್ಪರ್ಶಿಸಿ ಪವಿತ್ರಳನ್ನಾಗಿಮಾಡಿದ ಪಾದವಿದು. ಇವೆಲ್ಲಕ್ಕಿಂತಲೂ ಸಾಕ್ಷಾಲ್ಲಕ್ಷ್ಮೀದೇವಿಯ ತೊಡೆಗಳ ಮೇಲೆ ರಾಜಿಸುತ್ತಾ ಆ ಶ್ರೀದೇವಿಯ ಕೋಮಲಕರಕಮಲಗಳಿಂದ ಅನವರತವೂ ಒತ್ತಿಸಿಕೊಳ್ಳುವ ಪಾದಪದ್ಮವಿದು. ಎಲೈ ಶ್ರೀನಿವಾಸದೇವನೆ ಸುಕೃತಾತಿಶಯವುಳ್ಳವರಿಗೆ ಮಾತ್ರ ಲಭ್ಯವಾಗಲು ಅರ್ಹವಾದ ಇಂತಹ ಪಾದಕಮಲಗಳ ಸಂದರ್ಶನಾಶ್ರಯಗಳನ್ನು ನನಗೂ ಅನುಗ್ರಹಿಸಿಕೊಟ್ಟು ಈ ಆಕಿಂಚನನಾದ ನನ್ನನ್ನೂ ಉದ್ಧಾರಮಾಡು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ವೇಂಕಟೇಶನ ಸಮಸ್ತಾವಯವಗಳ ಸೌಂದರ್ಯವನ್ನೂ ವಿವರಿಸಲಾಗುತ್ತದೆ.

॥ ಶ್ಲೋ ॥ ಕಿಂನೇತ್ರಯೋಃ ಕಿಮಧರೇ ಕಿಮುದಾರಫಾಲೇ
ಕಿಂವಕ್ಷಸೀಹ ಕಿಮುದೀರ್ಘಭುಜೇಷು ತೇಽಹಂ।
ಕಿಂಜಂಘಯೋಃ ಕಿಮುಪದೋಃಪ್ರಹಿಣೋಮಿದೃಷ್ಟಿಂ
ಶ್ರೀ ವೆಂಕಟೇಶ ಮಮ ದೇಹಿ ಪದಾವಲಂಬಂ ॥ ೧೭ ॥

(ತಾತ್ಪರ್ಯ) ಎಲೈ ಶ್ರೀನಿವಾಸದೇವನೇ ! ನಿನ್ನ ಪ್ರತಿಯೊಂದು ಅವಯವವೂ ಅತ್ಯಂತ ರಮಣೀಯ ರೂಪವುಳ್ಳದ್ದಾಗಿ ಚಿತ್ತಾಕರ್ಷಕವಾಗಿರವುದು ಆದುದರಿಂದಲೇ ನಿನ್ನ ಅಂಗಾಂಗಗಳಲ್ಲಿ ಯಾವ ಯಾವ ಭಾಗವನ್ನು ದರ್ಶನ ಮಾಡುವೆವೋ ಆಯಾ ಭಾಗದಲ್ಲಿಯೇ ದೃಷ್ಟಿಯು ನೆಲೆಸಿಹೋಗಿ ನಮ್ಮನ್ನು ಮುಗ್ಧರನ್ನಾಗಿ ಮಾಡುತ್ತಿರುವುದು. ಹೀಗಿರುವುದರಿಂದ ನಿನ್ನ ಸಮಸ್ತಾವಯವಗಳ ಸೌಂದರ್ಯವನ್ನೂ ಅನುಭವಿಸಿ ತೃಪ್ತಿ ಪಡಬೇಕೆಂಬ ಆಸೆಯುಳ್ಳ ನಾವು ಈ ನಮ್ಮ ಕಣ್ಣುಗಳನ್ನು ನಿನ್ನ ದಿವ್ಯ ಮಂಗಳ ವಿಗ್ರಹದಲ್ಲಿ ಕಮಲದಂತೆ ಸುಂದರವಾದ ನಿನ್ನ ನೇತ್ರಗಳನ್ನು ದರ್ಶನ ಮಾಡುವುದಕ್ಕೆ ಪ್ರೇರಿಸಬೇಕೋ ಅಥವಾ ಮಂದಸ್ಮಿತಯುಕ್ತವಾದ ನಿನ್ನ ತುಟಿಗಳನ್ನು ಸಂದರ್ಶಿಸುವುದಕ್ಕಾಗಿ ಸೂಚಿಸಬೇಕೋ ಹಾಗಲ್ಲದಿದ್ದರೆ ವಿಸ್ತಾರವಾದ ನಿನ್ನ ಹಣೆಯ ಸೌಂದರ್ಯವನ್ನು ನೋಡಲು ಕಳುಹಿಸಬೇಕೋ ಅದೂ ಅಲ್ಲದಿದ್ದರೆ ಲಕ್ಷ್ಮೀದೇವಿಗೆ ವಾಸಸ್ಥಾನವಾಗಿರುವ ನಿನ್ನ ವಕ್ಷಸ್ಥಲದ ಸೊಬಗನ್ನು ಅನುಭವಿಸುವುದಕ್ಕೆ ನಿಯಮಿಸಬೇಕೋ ಅಥವಾ ನಿನ್ನ ದೀರ್ಘವಾದ ತೋಳುಗಳ ಅಂದವನ್ನು ಸಮೀಕ್ಷಿಸುವುದಕ್ಕೆ ಪ್ರೇರಿಸಬೇಕೋ ಅಥವಾ ನಿನ್ನ ಮೊಣಕಾಲುಗಳ ಚೆಂದವನ್ನು ನೋಡುವುದಕ್ಕೆ ಕಳುಹಿಸಬೇಕೋ ಇವೆಲ್ಲಕ್ಕಿಂತಲೂ ನಿನ್ನ ಪಾದಪದ್ಮಗಳ ಭವ್ಯರೂಪವನ್ನು ನಿರೀಕ್ಷಿಸಲು ಪ್ರೇರಿಸಬೇಕೋ ! ಎಂಬುವದೊಂದನ್ನೂ ತಿಳಿಯದೇ ನಾವು ಭ್ರಾಂತರಾಗಿರುವೆವು ಇಂತಹ ಅದ್ಭುತ ಸೌಂದರ್ಯ ಪರಿಪೂರ್ಣನಾಗಿ ಸಾಕ್ಷಾನ್ಮನ್ಮಥ ಮನ್ಮಥನಾಗಿರುವ ಸ್ವಾಮಿಯೇ ! ನೀನು ನಿನ್ನ ಪದಾವಲಂಬನವನ್ನು ದಯೆಪಾಲಿಸಿ ನನ್ನನ್ನು ಸಲಹು

|| ಅವತಾರಿಕೆ || ಈ ರೀತಿ ಶ್ರೀನಿವಾಸಮೂರ್ತಿಯ ದೇಹ ಸೌಂದರ್ಯವನ್ನು ಭೂಷಣಾದಿ ವೈಭವಗಳೊಡನೆ ಇದುವರೆವಿಗೂ ವಿವರವಾಗಿ ವರ್ಣಿಸಿ ಇನ್ನು ಮುಂದಿನ ಶ್ಲೋಕದಲ್ಲಿ ಈ ಭಗವಂತನು ನೆಲೆಸಿರುವ ದೇವಮಂದಿರವನ್ನು ಪ್ರಶಂಸಿಸಲಾಗುತ್ತದೆ.

|| ಶ್ಲೋ || ಗಂಧರ್ವಯಕ್ಷಸುರಕಿನ್ನರಮಾನವೋದ್ಯ
ದ್ದೀರ್ಘಪ್ರಣಾಮಮಸೃಣಾಂಗಣಭವ್ಯವೇಶ್ಮ ।
ಸ್ವರ್ಣೋಜ್ಜ್ವಲೋಚ್ಛ್ರಿತ ವಿಮಾನಲಸದ್ದಿಗಂತ !
ಶ್ರೀ ವೆಂಕಟೇಶ ಮಮದೇಹಿ ಪದಾವಲಂಬಂ || ೧೮ ||

(ತಾತ್ಪರ್ಯ) ಎಲೈ ಶ್ರೀನಿವಾಸನೇ ! ನಿನ್ನ ಸಂದರ್ಶನಕ್ಕಾಗಿ ಬರುತ್ತಿರುವ ಗಂಧರ್ವ, ಯಕ್ಷ, ದೇವ ಕಿನ್ನರ ಮಾನವರೇ ಮೊದಲಾದವರು ನಿನ್ನ ಆಲಯಾಂಕಣಗಳಲ್ಲಿ ದೀರ್ಘದಂಡ ಪ್ರಣಾಮವನ್ನು ಮಾಡುವರು, ಹೀಗೆ ಸತತವೂ ಭಕ್ತರು ಬರುತ್ತಾ ನಮಸ್ಕಾರ ಮಾಡುತ್ತಾ ಇರುವುದರಿಂದ ನಿನ್ನ ಆಲಯದ ಕುಟ್ಟಿಮಪ್ರದೇಶವೆಲ್ಲವೂ ಸವೆದು ಬಹಳ ನುಣುಪಾಗಿ ಪ್ರಕಾಶಿಸುತ್ತಲಿದೆ. ಮತ್ತು ನಿನ್ನ ಆಲಯದ ಉನ್ನತವಾದ ಸುವರ್ಣಮಯ ದಿವ್ಯ ವಿಮಾನವು ದಶದಿಕ್ಕುಗಳಿಗೂ ತನ್ನ ಅದ್ಭುತ ಕಾಂತಿಯನ್ನು ಬೀರುತ್ತಾ ಸಮಸ್ತ ಭಕ್ತರಿಗೂ ಸುಸ್ವಾಗತವನ್ನು ನೀಡುತ್ತಿದೆಯೋ ಎಂಬಂತೆ ಪ್ರಕಾಶಿಸುತ್ತಿರುವುದು. ಇಂತಹ ದಿವ್ಯ ಸುವರ್ಣ ವಿಮಾನ ವಿರಾಜಿತವಾದ ಭವ್ಯ ಮಂದಿರ ಮಧ್ಯದಲ್ಲಿ ನೆಲೆಸಿರುವ ಮಹಾಮಹಿಮನಾದ ಶ್ರೀ ವೇಂಕಟೇಶನೇ! ನಿನ್ನ ಪಾದಾರವಿಂದದ ಆಸರೆಯನ್ನು ಕೊಟ್ಟು ನನ್ನನ್ನು ಪರಿಪಾಲಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಇಂತಹ ಶ್ರೀನಿವಾಸದೇವನನ್ನು ಶಿಖರಾಗ್ರದಲ್ಲಿ ಧರಿಸಿಕೊಂಡಿರುವ ಈ ವೇಂಕಟಾಚಲದ ಶ್ರೇಷ್ಠತೆಯನ್ನು ಹೊಗಳಲಾಗುತ್ತದೆ.

॥ ಶ್ಲೋ ॥ ವೈಕುಂಠವಾಸ ! ಕಲಶಾಬ್ಧಿನಿವಾಸ ! ವಿಶ್ವರೂಪ ।
ಪ್ರಕೃಷ್ಟರವಿಮಂಡಲಮಧ್ಯವರ್ತಿನ್ ।
ಭಕ್ತಾರ್ದ್ರಚಿತ್ತವಸತೇ ! ಭುಜಗಾದ್ರಿನಾಥ !
ಶ್ರೀ ವೇಂಕಟೇಶ ! ಮಮ ದೇಹಿ ಪದಾವಲಂಬಂ ॥ ೧೯ ॥

(ತಾತ್ಪರ್ಯ) ಯಾವ ಪರಮ ಪದದ ಮಹಿಮೆಯನ್ನು ಮನಸ್ಸಿನಿಂದ ಊಹಿಸುವುದಕ್ಕೂ ಕೂಡ ಸಾಧ್ಯವಿಲ್ಲವೋ, ಯಾವ ಪರಮ ಪದವು ಸಮಸ್ತ ಬ್ರಹ್ಮಾಂಡಗಳನ್ನೂ ಅತಿಕ್ರಮಿಸಿ, "ತಮಸಃ ಪಾರೆ" ಎಂದು ದಿವ್ಯ ತೇಜಃಪ್ರಚುರವಾಗಿ ಪ್ರಕಾಶಿಸುತ್ತಿದೆಯೋ ಯಾವ ಸ್ಥಾನವು ಕ್ಲೇಶ ದುಃಖಾದಿ ಬಾಧೆಗಳ ಸಂಪರ್ಕವೇ ಇಲ್ಲದಂತೆ ನಿರಂತರವೂ ಅನಂತ ಬ್ರಹ್ಮಾನಂದದಾಯಕವಾಗಿರುವುದೋ ಯಾವ ಸ್ಥಾನವು ನಿತ್ಯರಿಗೂ, ಮುಕ್ತರಿಗೂ ವಾಸಯೋಗ್ಯವಾಗಿದ್ದು ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರರಾದವರಿಗೆ ಮಾತ್ರ ಹೊಂ

ದಲು ಸಾಧ್ಯವಾಗಿರುವುದೋ ಅಂತಹ ವೈಕುಂಠವೆಂಬ ದಿವ್ಯಸ್ಥಾನದಲ್ಲಿ ಶ್ರೀ ಭೂ ನೀಳಾದಿ ದಿವ್ಯ ಮಹಿಷಿಯರೊಡಗೂಡಿ ಅನಂತ ಗರುಡ ವಿಷ್ವಕ್ಸೇನಾದಿಗಳಿಂದ ಉಪಚರಿಸಲ್ಪಡುತ್ತಾ ಪರವಾಸುದೇವನೆಂಬ ನಾಮಧೇಯದಿಂದ ನೀನು ನಿತ್ಯ ವಾಸವನ್ನು ಮಾಡುತ್ತಿರುವೆ. ಹಾಗೆಯೇ ಕ್ಷೀರಸಮುದ್ರವು ನಿನಗೆ ಶ್ವಶುರ ಗೃಹವಾದುದರಿಂದ ಅಲ್ಲಿಯೂ ಅತ್ಯಂತ ಆಸಕ್ತಿಯಿಂದ ಶೇಷಶಾಯಿಯಾಗಿ ನೆಲಸಿರುವೆ. ಮತ್ತು ಸೂರ್ಯಮಂಡಲದ ಮಧ್ಯದಲ್ಲಿ ಹಿರಣ್ಮಯಃಪುರುಷಃ ಎಂಬಂತೆ ನಿವಾಸಿಸುತ್ತಿರುವೆ. ಹಾಗೆಯೇ ಭಕ್ತೋತ್ತಮರ ಭಕ್ತಿರಸಾರ್ದ್ರವಾದ ಹೃದಯ ಕಮಲ ಮಧ್ಯದಲ್ಲಿಯೂ ಸುಖಿಸುತ್ತಿರುವೆ. ಈ ಸ್ಥಾನಗಳೆಲ್ಲಕ್ಕಿಂತಲೂ ಭುಜಗಾದ್ರಿಯೆಂಬ ಈ ವೇಂಕಟಾಚಲದಲ್ಲಿ ಅತಿಶಯವಾದ ಪ್ರೇಮದಿಂದ ವಾಸಿಸುತ್ತಿರುವೆ. ವಿಶ್ವರೂಪಿಯಾದ ಎಲೈ ಶ್ರೀನಿವಾಸದೇವನೇ ! ಪಾಮರರಾದ ಚೇತನರನ್ನೂ ಸಹ ಉದ್ಧರಿಸಬೇಕೆಂಬುದೇ ಈ ಭುಜಗಾದ್ರಿಯಲ್ಲಿ ನೀನು ವಾಸಮಾಡುವುದರ ರಹಸ್ಯಾರ್ಥವಾದುದರಿಂದ ವೈಕುಂಠಾದಿ ದಿವ್ಯಸ್ಥಾನಗಳಿಗಿಂತಲೂ ಈ ತಿರುಪತಿ ಕ್ಷೇತ್ರವೇ ಶ್ರೇಷ್ಠವೆನಿಸಿಕೊಂಡಂತೆ ಆಯಿತು. ಇಂತಹ ಶೇಷಾದ್ರಿನಿವಾಸಿಯಾದ ಶ್ರೀನಿವಾಸನೇ ನಿನ್ನ ಪದಪಂಕಜಗಳ ಆಶ್ರಯವನ್ನು ನನಗೂ ಕಲ್ಪಿಸಿಕೊಟ್ಟು ನನ್ನನ್ನು ಪರಿಪಾಲಿಸು.

॥ ಅವತಾರಿಕೆ ॥ ಇನ್ನು ಮುಂದಿನ ಮೂರು ಶ್ಲೋಕಗಳಲ್ಲಿ ಶ್ರೀನಿವಾಸನ ಪವಿತ್ರ ನಾಮಗಳನ್ನು ಸಂಕೀರ್ತನಮಾಡಲಾಗುತ್ತದೆ.

॥ ಶ್ಲೋ ॥ ಗೋಪಾಲರೂಪ ! ಗರುಡಧ್ವಜ ! ಪದ್ಮನಾಭ !
ಗೋವಿಂದ ! ಕೃಷ್ಣ ! ಮಧುಸೂದನ ! ವಾಸುದೇವ !
ನಾರಾಯಣಾಚ್ಯುತ ! ರಮೇಶ ! ಹರೇ ! ಮುರಾರೇ !
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೨೦ ॥

(ತಾತ್ಪರ್ಯ) ಎಲೈ ಪರಾತ್ಪರನೇ ! ನೀನು ಅಪರಿಮಿತ ನಾಮಧೇಯಗಳಿಂದ ಸ್ತುತಿಸಲ್ಪಡುವೆ. ಅಂತಹ ಅನಂತ ನಾಮಧೇಯಗಳು ನಿನ್ನ ಸ್ವರೂಪ ರೂಪಗುಣವಿಭವಾದಿ ಕಲ್ಯಾಣ ಗುಣಗಳಲ್ಲಿ ಒಂದೊಂದು ಗುಣವನ್ನು

ಒಂದೊಂದು ಹೆಸರು ಸೂಚಿಸುತ್ತಾ ನಿನಗೆ ವಾಚಕವಾಗಿರುವುದು. ಆದುದ ರಿಂದಲೇ ನಿನ್ನ ಅನೇಕ ಹೆಸರುಗಳನ್ನು ಉಚ್ಚರಿಸುವಾಗ ಅದರಲ್ಲಿಯೇ ಅಡ ಗಿರುವ ನಿನ್ನ ಕಲ್ಯಾಣ ಗುಣಗಳ ಹೆಸರನ್ನೂ ವರ್ಣಿಸಿದಂತೆಯೇ ಆಗುತ್ತದೆ. ಈ ಕಲಿಯುಗದಲ್ಲಿಯಾದರೋ ತಪಸ್ಸಿನಿಂದಲಾಗಲಿ ಶ್ರಮಸಾಧ್ಯವಾದ ಇತರ ವಿಧವಾದ ಆರಾಧನಾದಿಗಳಿಂದಲಾಗಲಿ ಏಕಾಗ್ರಚಿತ್ತದಿಂದ ಪರಮಾತ್ಮನಾದ ನಿನ್ನನ್ನು ಪೂಜಿಸುವ ಸಾಮರ್ಥ್ಯವು ಮನುಷ್ಯರಲ್ಲಿ ಬಹಳ ಕಡಿಮೆಯೆಂದು ಮೊದಲೇ ತಿಳಿದಿರುವ ಪುರಾತನ ಮಹರ್ಷಿಗಳು ನಿನ್ನ ನಾಮೋಚ್ಚಾರಣೆಯ ಪ್ರಭಾವವನ್ನು ಅರಿತವರಾದುದರಿಂದ "ಕಲೌಸಂಕೀರ್ತ್ಯ ಕೇಶವಂ" ಎಂದೂ "ವೈಕುಂಠ ನಾಮ ಗ್ರಹಣಮಶೇಷಾಘಹರಂವಿದುಃ" ಎಂದೂ "ಕಲೌ ಕಲ್ಮಷ ಚಿತ್ತಾನಾಂ ಪಾಪದ್ರವ್ಯೋಪ ಜೀವಿನಾಂ। ವಿಧಿಕ್ರಿಯಾವಿಹೀನಾನಾಂ ಗತಿರ್ಗೋವಿಂದಕೀರ್ತನಂ" ಎಂದೂ ಈ ಕಲಿಯುಗದಲ್ಲಿ ನಿನ್ನ ನಾಮ ಸಂಕೀರ್ತನವೇ ಶ್ರೇಯಸ್ಕರವೆಂದು ನಿರ್ಧರಿಸಿ ಹೇಳಿರುವರು. ಆದುದರಿಂದ ಅಂತಹ ಪರಮಪಾವನವಾದ ನಾಮಾಮೃತಸಾಗರದಲ್ಲಿ ಕೆಲವು ನಾಮಾ ಮೃತ ಬಿಂದುಗಳನ್ನು ಇಲ್ಲಿ ಸಂಕೀರ್ತನ ಮಾಡುವ ರೂಪದಿಂದ ಪಾನಮಾಡಿ ಪರಿಶುದ್ಧನಾಗಿ ನಿನ್ನನ್ನು ಬೇಡಿಕೊಳ್ಳುತ್ತೇನೆ.

ಎಲೈ ವೇಣುಗೋಪಾಲಸ್ವಾಮಿಯೆ! ಗರುಡಧ್ವಜನೇ! ಪದ್ಮನಾಭ, ಗೋವಿಂದ, ಕೃಷ್ಣ, ಮಧುಸೂದನ, ವಾಸುದೇವ, ನಾರಾಯಣ, ಅಚ್ಯುತ, ರಮೇಶ, ಹರೇ, ಮುರಾರೇ, ಈ ರೀತಿ ಸಂಬೋಧಿಸಿ ನಿನ್ನನ್ನು ಪ್ರಾರ್ಥಿ ಸುತ್ತಲಿರುವ ನನಗೆ ನಿನ್ನ ಪದಾವಲಂಬನವನ್ನು ಕೊಟ್ಟು ನನ್ನನ್ನು ಸಲಹು.

॥ ಶ್ಲೋ ॥ ವೈಕುಂಠ! ಕೇಶವ! ನೃಸಿಂಹ! ರಥಾಂಗಪಾಣೇ।
ದಾಮೋದರಾಹಿಶಯನಾಂಬುಜನೇತ್ರ! ವಿಷ್ಣೋ।
ದಾಶಾರ್ಹ! ದಾನವರಿಪೋ! ಜಗದೀಶ! ರಾಮ!
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೨೧ ॥

(ತಾತ್ಪರ್ಯ) ವೈಕುಂಠ! ಕೇಶವ! ನೃಸಿಂಹ! ರಥಾಂಗಪಾಣೇ, ದಾಮೋ ದರ, ಅಹಿಶಯನ, ಅಂಬುಜನೇತ್ರ, ವಿಷ್ಣೋ, ದಾಶಾರ್ಹ, ದಾನವರಿಪೋ,

ಜಗದೀಶ, ರಾಮ ಈ ರೀತಿ ನಿನ್ನ ಹೆಸರುಗಳನ್ನು ಕೂಗಿ ಮೊರೆಯಿಡುತ್ತಿರುವ ನನಗೆ ನಿನ್ನ ಪದಾವಲಂಬನವನ್ನು ಅನುಗ್ರಹಿಸಿಕೊಟ್ಟು ನನ್ನನ್ನು ಕಾಪಾಡು.

॥ ಶ್ಲೋ ॥ ಶೌರೇ ! ಚತುರ್ಭುಜ ! ಜನಾರ್ದನ ! ರುಕ್ಮಿಣೀಶ
ಭೋವಿಷ್ಟರಶ್ರವ ! ಉಪೇಂದ್ರ ! ಗದಾಗ್ರಜನ್ಮ !
ಶಾರ್ಙ್ಗಿ ! ಮುಕುಂದ ! ಪುರುಷೋತ್ತಮ ! ಮುಂಜಿಕೇಶ
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೨೨॥

(ತಾತ್ಪರ್ಯ) ಎಲೈ ಶೌರಿಯೇ ಚತುರ್ಭುಜ, ಜನಾರ್ದನ ! ರುಕ್ಮಿಣೀಶ, ಎಲೈ ವಿಷ್ಟರಶ್ರವಸ್ಸೇ, ಉಪೇಂದ್ರನೇ ಗದಾಗ್ರಜನೇ ಶಾಂರ್ಜಿ ಮುಕುಂದ ಪುರುಷೋತ್ತಮ, ಮುಂಜಿಕೇಶ ಈ ಹೆಸರುಗಳ ಸಂಕೀರ್ತನದಿಂದ ನಿನ್ನನ್ನು ಕೂಗಿ ಬೇಡಿಕೊಳ್ಳುತ್ತಿರುವ ನನಗೆ ನಿನ್ನ ಪದಪದ್ಮಾವಲಂಬನವನ್ನು ಕೊಟ್ಟು ಕಾಪಾಡು.

॥ ಅವತಾರಿಕೆ ॥ ಇನ್ನು ಮುಂದೆ ಭಗವಂತನ ಕಲ್ಯಾಣ ಗುಣಗಳನ್ನು ಭಾವಿಸುತ್ತಾ, ಆ ಪರಮಾತ್ಮನನ್ನು ಹೊಂದಲು ಅನುಕೂಲವಾದ ಯಾವುದೊಂದು ಒಳ್ಳೆಯ ಗುಣವೂ ತನ್ನಲ್ಲಿ ಇಲ್ಲದೇ ಇರುವುದನ್ನು ಯೋಚಿಸಿ ಪಾಪ ಪೂರ್ಣನಾದ ತನ್ನನ್ನು ಉದ್ಧರಿಸಲು ಆ ಶ್ರೀಹರಿಯ ಅನಂತ ಕಲ್ಯಾಣ ಗುಣಗಳೇ ಸಿದ್ಧವಾಗಿರುವುವು ಎಂಬ ಭರವಸೆಯಿಂದ ಅವುಗಳನ್ನು ಸ್ತುತಿಸುವುದರ ಮೂಲಕ ತನ್ನ ರಕ್ಷಣೆಯನ್ನು ಪ್ರಾರ್ಥಿಸಲಾಗುತ್ತದೆ.

॥ ಶ್ಲೋ ॥ ಪ್ರಾಕ್ತ್ವೇ ಪರತ್ವಸುಲಭತ್ವಗುಣಾಶ್ರಯತ್ವಂ
ಪ್ರೋಕ್ತಂ ಯದತ್ರಕಲರ್ಯ ಸಮುಪಾಶ್ರಿತಾನಾಂ ।
ಪಾಪೀಯಸಾಮಪಿಹಿ ದರ್ಶಯಸಿ ಸ್ವರೂಪಂ
ತದ್ವೇಂಕಟೇಶ ! ಮಮ ದೇಹಿ ಪದಾವಲಂಬಂ ॥ ೨೩ ॥

(ತಾತ್ಪರ್ಯ) ಎಲೈ ಶ್ರೀ ವೇಂಕಟೇಶನೇ ! ಪರಾತ್ಪರನೆನಿಸಿ ಬ್ರಹ್ಮಾದಿಗಳಿಗೂ ದುರ್ಲಭನಾಗಿರುವೆ. ಆದರೂ ಪರಮ ದಯಾಳುವಾದ ನೀನು ಅನೇಕ

ಸಂದರ್ಭಗಳಲ್ಲಿ ಭಕ್ತರ ಪರಿಚರ್ಯೆಯನ್ನು ಕೂಡ ಮಾಡುತ್ತ ನಿನ್ನ ಸೌಲಭ್ಯ ಗುಣವನ್ನೂ ವ್ಯಕ್ತಪಡಿಸಿರುವೆ. ಮೇಲೆ ಹೇಳಿದ ಪರತ್ವ ಮತ್ತು ಸೌಲಭ್ಯ ಈ ಎರಡು ಗುಣಗಳೂ ಸ್ವಭಾವತಃ ಪರಸ್ಪರ ವಿರುದ್ಧವಾದವುಗಳು. ಹೀಗಿದ್ದರೂ ನಿನ್ನಲ್ಲಿ ಮಾತ್ರ ಈ ಎರಡು ಗುಣಗಳೂ ಸಮಾನವಾಗಿ ಕಲೆತು ಲೋಕ ಕಲ್ಯಾಣವನ್ನು ಮಾಡುತ್ತಿವೆಯೆಂದು ಜ್ಞಾನಿಗಳಿಂದ ಮೊದಲೇ ಹೊಗಳಲ್ಪಟ್ಟವೆ. ಅದನ್ನೇ ಈಗ ಸರ್ವರಿಗೂ ಪ್ರಕಾಶಪಡಿಸುವುದಕ್ಕಾಗಿ ನೀನು ಈ ವೇಂಕಟಾಚಲದಲ್ಲಿ ನೆಲೆಯಾಗಿ ನಿಂತು ದುರಿತಶಾಲಿಗಳಾದ ಪಾಮರರಿಗೂ ನಿನ್ನ ದರ್ಶನವನ್ನು ಕೊಟ್ಟು ಎಲ್ಲರನ್ನೂ ಉದ್ಧರಿಸುತ್ತಿರುವೆ. ಆದುದರಿಂದ ಪಾಪಿಷ್ಠನಾದ ಈ ನನಗೂ ನಿನ್ನ ಪದಾವಲಂಬನವನ್ನು ಕೊಟ್ಟು ನನ್ನನ್ನು ರಕ್ಷಿಸು

॥ ಅವತಾರಿಕೆ ॥ ವೈಕುಂಠಾದಿ ದಿವ್ಯಸ್ಥಾನಗಳಲ್ಲಿ ಸಾಧ್ಯವಲ್ಲದ ಪಾಮರ ಜನೋದ್ಧರಣ ಕಾರ್ಯವನ್ನು ನಿರ್ವಹಿಸುವುದಕ್ಕಾಗಿಯೇ ಶ್ರೀನಿವಾಸನಾಗಿ ನೀನು ಈ ತಿರುಪತಿ ಕ್ಷೇತ್ರಕ್ಕೆ ಬಂದು ನೆಲಸಿರುವೆ ಎಂಬುವ ಅಂಶವನ್ನು ಈ ಶ್ಲೋಕದಲ್ಲಿ ಪರಮಾತ್ಮನಿಗೆ ಜ್ಞಾಪಕಪಡಿಸಲಾಗಿದೆ.

॥ ಶ್ಲೋ ॥ ವೈಕುಂಠಲೋಕಮಪಿ ದುಗ್ಧಮಹಾರ್ಣವಂಚಾ
ಪ್ಯರ್ಕಸ್ಯ ಮಂಡಲಮಪಿಪ್ರವಿಹಾಯ ಕಸ್ಮಾತ್ ।
ಅತ್ರಾಗತಸ್ತ್ವಮಿತಿ ತನ್ಮನಸಾ ವಿಮೃಶ್ಯ
ಶ್ರೀ ವೇಂಕಟೇಶ ! ಮಮ ದೇಹಿ ಪದಾವಲಂಬಂ ॥ ೨೩ ॥

(ತಾತ್ಪರ್ಯ) ಎಲೈ ಶ್ರೀನಿವಾಸನೇ ! ನೀನೇನೋ ಸರ್ವಜ್ಞನಾಗಿಯೇ ಇರಬಹುದು ಆದರೂ ನಾನು ನಿನಗೆ ಎಚ್ಚರಿಕೆಯನ್ನು ಕೊಟ್ಟು ಜ್ಞಾಪಿಸಿ ಕೊಡತಕ್ಕ ಅಂಶವೂ ಒಂದಿದೆ. ಅದೇನೆಂದರೆ ಹಿಂದೆ ಹೇಳಿದಂತೆ ಶ್ರೇಷ್ಠ ತಮಗಳಾದ ವೈಕುಂಠ ಲೋಕ ಕ್ಷೀರಾಬ್ಧಿ ರವಿಮಂಡಲ ಇವುಗಳೆಲ್ಲವೂ ನಿನಗೆ ಪ್ರಿಯತಮಗಳಾದ ಪ್ರದೇಶಗಳಾಗಿದ್ದರೂ ನೀನು ಅವುಗಳನ್ನೆಲ್ಲಾ ಲಕ್ಷಿಸದೇ ಈ ತಿರುಪತಿ ಕ್ಷೇತ್ರಕ್ಕೆ ಬಂದು ನೆಲಸಿರುವುದರ ಉದ್ದೇಶವೇನೆಂಬು ವುದನ್ನು ಮನಸ್ಸಿನಲ್ಲಿ ಚೆನ್ನಾಗಿ ವಿಮರ್ಶಿಸಿ ಯೋಚನೆಮಾಡಿ ನೋಡು.

ಆಗ ಇಲ್ಲಿ ನಿನ್ನ ಕರ್ತವ್ಯವೇನೆಂಬುವುದು ನಿನಗೇ ವೇದ್ಯವಾಗುತ್ತದೆ. ಅನಂತರ ನೀನೇ ನನ್ನನ್ನು ಉದ್ಧರಿಸಲು ಸಿದ್ಧನಾಗುವೆ. ಅಂದರೆ "ಸುಕೃತ ಶಾಲಿಗಳಾದ ದೇವಾದಿಗಳಿಗೆ ಮಾತ್ರ ದರ್ಶನಾರ್ಹವಾದ ಶ್ರೀ ವೈಕುಂಠಾದಿ ಸ್ಥಾನಗಳಲ್ಲಿ ನಾನು ನಿವಾಸಿಸುತ್ತಿದ್ದರೆ ಪಾಮರರಾದ ಭೂಲೋಕದ ಚೇತನರೂ ನನ್ನನ್ನು ದರ್ಶನಮಾಡಿ ಉದ್ಧಾರವಾಗುವ ಬಗೆ ಹೇಗೆ ? ಭೂಲೋಕದ ಚೇತನರೂ ನನ್ನ ದರ್ಶನದಿಂದ ಕೃತಾರ್ಥರಾಗಲಿ" ಎಂದು ನೀನು ಆಲೋಚಿಸಿಯಲ್ಲವೇ ಈ ವೇಂಕಟಾಚಲಕ್ಕೆ ದಯಮಾಡಿಸಿ ಇಲ್ಲಿಯೇ ನಿತ್ಯ ಸಾನ್ನಿಧ್ಯವನ್ನು ಮಾಡಿರುವುದು ? ಆದುದರಿಂದ ಪಾಮರರಲ್ಲೆಲ್ಲಾ ಪ್ರಥಮ ಸ್ಥಾನವನ್ನು ಪಡೆದಿರುವ ನನ್ನಲ್ಲಿ ಕೃಪೆಮಾಡಿ ನಿನ್ನ ಪದಾವಲಂಬನವನ್ನಿತ್ತು ನನ್ನನ್ನು ಸಲಹು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ವೇಂಕಟೇಶ್ವರಸ್ವಾಮಿಯು ಭಕ್ತಜನರಿಂದ ವಿಶೇಷವಾಗಿ ಧನಕನಕಾದಿಗಳನ್ನು ಸಂಗ್ರಹಿಸುತ್ತಿರುವ ವಿಚಾರವು ಹೇಳಲ್ಪಡುತ್ತದೆ.

॥ ಶ್ಲೋ ॥ ಭೂಯಿಸ್ತರಾಣಿ ಚ ವಸೂನಿ ದಿನೇದಿನೇತ್ವಂ
ಸಂಗೃಹ್ಯ ಭಕ್ತಜನತೋऽವಸಿ ಸರ್ವಲೋಕಾನ್ ।
ಶ್ರೀಶಸ್ಯ ಹಂತ ತವ ಕೀದೃಗಿಯಂಚ ಲೀಲಾ
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೨೪ ॥

(ತಾತ್ಪರ್ಯ) ಎಲೈ ರಮಾಕಾಂತನೇ ! ನಿನ್ನ ವಿಚಿತ್ರ ಕಾರ್ಯಗಳು ಎಂತಹ ವರನ್ನೂ ಭ್ರಾಂತರನ್ನಾಗಿ ಮಾಡುತ್ತಿವೆ. ಹೇಗೆಂದರೆ ? ನೀನು ಸಂಪತ್ತಿಗೆಲ್ಲಾ ಅಧಿದೇವತೆಯಾದ ಸಾಕ್ಷಾತ್ ಲಕ್ಷ್ಮೀದೇವಿಗೆ ಪತಿಯಾಗಿರುವೆ. ಇಂತಹ ಲಕ್ಷ್ಮೀರಮಣನಾದ ನೀನು ಹರಕೆಗಳ ನೆಪದಿಂದ ಧನಕನಕಾದಿಗಳನ್ನು ಪ್ರತಿದಿನವೂ ಅಪರಿಮಿತವಾಗಿ ಭಕ್ತರಿಂದ ಕಿತ್ತುಕೊಂಡು ನಿನ್ನ ಬೊಕ್ಕಸವನ್ನು ತುಂಬಿಕೊಳ್ಳುತ್ತಿರುವೆ. ಭಕ್ತರನ್ನು ಕಾಪಾಡಲು ಸಿದ್ಧನಾಗಿ ನಿಂತಿರುವ ನೀನು ಈ ರೀತಿ ಧನ ಸಂಗ್ರಹಣದಲ್ಲಿ ನಿರತನಾಗಿರುವುದರ ಅರ್ಥವೇನೆಂಬ ವಿಚಾರವೇ ತಿಳಿಯದುದಾಗಿದೆ. ಅಥವಾ ಕೃಷ್ಣಾವತಾರ

ದಲ್ಲಿ ನಿನ್ನ ಸ್ನೇಹಿತನಾದ ಕುಚೇಲನಿಂದ ಹಿಡಿಯವಲಕ್ಕಿಯನ್ನು ಪಡೆದು ಅವನಿಗೆ ಅಮಿತೈಶ್ವರ್ಯವನ್ನು ಕರುಣಿಸಿದೆಯಷ್ಟೆ? ಹಾಗೆಯೇ ಈಗ ಭಕ್ತರಿಂದ ಕಾಣಿಕೆಗಳನ್ನು ಸ್ವೀಕರಿಸಿ, ಅವರು ಸಂಪಾದಿಸಿದ ಧನವನ್ನು ಸಾರ್ಥಕಗೊಳಿಸುತ್ತಾ ಅವರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವುದಲ್ಲದೆ ಸಮಸ್ತರನ್ನೂ ಪರಿಪಾಲಿಸುತ್ತಾ ಇರುವೆ. ಇಂತಹ ಆಶ್ಚರ್ಯಚರಿತನಾದ ವೇಂಕಟರಮಣಸ್ವಾಮಿಯೇ! ನಿನ್ನ ಪದಕಮಲಗಳ ಅವಲಂಬನವನ್ನು ಕೊಟ್ಟು ನನ್ನನ್ನು ಸಂರಕ್ಷಿಸು.

|| ಅವತಾರಿಕೆ || ಭಗವಂತನ ಸಾನ್ನಿಧ್ಯವನ್ನು ಪಡೆಯಲು ವಿರೋಧಿಯಾದ ತನ್ನ ಪಾಪಗಳನ್ನು ಸೂಚಿಸಿ ಆಕಿಂಚನನಾದ ತನ್ನನ್ನು ಉದ್ಧರಿಸುವುದಕ್ಕೆ ಪರಮಾತ್ಮನ ಭಕ್ತವಾತ್ಸಲ್ಯಾದಿ ಗುಣಗಳೇ ಸಮರ್ಥಗಳೆಂದು ಈ ಶ್ಲೋಕದಲ್ಲಿ ತಿಳಿಸಲಾಗುತ್ತದೆ.

|| ಶ್ಲೋ || ಪ್ರಾಪ್ತುಂ ತ್ವದಂಘ್ರಿಕಮಲಂ ನಿತರಾಮನರ್ಹಃ
ಪಾಪಾತಿಭಾರಪರಿಧೂಸರದುಷ್ಟಬುದ್ಧಿಃ ।
ಭೋ! ಭಕ್ತವತ್ಸಲ ತಥಾಪಿ ವಿಮುಂಚ ಮಾ ಮಾಂ
ಶ್ರೀ ವೆಂಕಟೇಶ ಮಮದೇಹಿ ಪದಾವಲಂಬಂ || ೨೫ ||

(ತಾತ್ಪರ್ಯ) ಎಲೈ ಪುರುಷೋತ್ತಮನೇ ನಾನೇನೋ ನಿನ್ನ ಪಾದಾಶ್ರಯುವನ್ನು ಕರುಣಿಸೆಂದು ಬಗೆ ಬಗೆಯಾದ ರೀತಿಯಲ್ಲಿ ನಿನ್ನನ್ನು ಬೇಡಿಕೊಳ್ಳುತ್ತಿರುವೆನು. ಆದರೆ ವಿಮರ್ಶೆಮಾಡಿ ನೋಡಿದರೆ ನಿನ್ನ ಚರಣಾರವಿಂದವನ್ನು ಹೊಂದುವ ಯೋಗ್ಯತೆಯು ಯಾವ ಪ್ರಕಾರದಿಂದಲೂ ಕಿಂಚಿತ್ತಾದರೂ ನನ್ನಲ್ಲಿಲ್ಲವು, ಏತಕ್ಕೆಂದರೆ ಊಹಿಸುವುದಕ್ಕೂ ಸಾಧ್ಯವಿಲ್ಲದಷ್ಟು ಮಹಾ ಪಾಪಗಳನ್ನು ಮಾಡಿ ಅದರ ಹೊರೆಯಿಂದ ಮಲಿನವಾಗಿ ಕೆಟ್ಟಿರುವ ಸ್ವಭಾವವುಳ್ಳವನಾಗಿರುವೆನು! ಹೀಗಿರುವ ನನಗೆ ನಿನ್ನ ಪದಾವಲಂಬನವನ್ನು ಕೊಡೆಂದು ಕೇಳುವುದಕ್ಕೆ ಬಾಯಿ ತಾನೇ ಹೇಗೆ ಬಂದೀತು? ಹೀಗಿದ್ದರೂ ನನ್ನ ಮನಸ್ಸಿನಲ್ಲಿ ಯಾವುದೋ ಒಂದು ವಿಧವಾದ ಆಸೆಯು ಮಾತ್ರ ನಿನ್ನನ್ನು ಪ್ರಾರ್ಥಿಸುವಂತೆ ಪ್ರೇರಿಸುತ್ತಿರುವುದು. ಅದೇನೆಂದರೆ ನೀನು

ಪರಮ ದಯಾಳು ಮತ್ತು ಭಕ್ತವತ್ಸಲನು. ಆದುದರಿಂದ ನಾನು ಎಷ್ಟೇ ಪಾಪಿಷ್ಠನಾಗಿದ್ದರೂ ನೀನು ಎಂದಿಗೂ ನನ್ನನ್ನು ಕೈಬಿಡಲಾರೆ ಎಂಬ ಆಸೆಯು ಬಾಧಿಸುತ್ತಿರುವುದರಿಂದಲೇ ನಿನ್ನಲ್ಲಿ ಧೈರ್ಯದಿಂದ ನಿಂತು ಕೇಳಿ ಕೊಳ್ಳುತ್ತಿರುವೆನು. ಎಲೈ ಶ್ರೀನಿವಾಸನೇ! ನೀನೂ ಕೂಡ ನನ್ನ ಪಾಪ ಗಳನ್ನು ಲಕ್ಷಿಸದೆ ಕ್ಷಮಿಸಿ ಬಿಟ್ಟು ನಿನ್ನ ಭಕ್ತವಾತ್ಸಲ್ಯ ಗುಣದಿಂದ ನನ್ನಲ್ಲಿ ಕೃಪೆಮಾಡಿ ನಿನ್ನ ಪದಾವಲಂಬನವನ್ನಿತ್ತು ನನ್ನನ್ನು ಕಾಪಾಡಿಕೊ.

|| ಅವತಾರಿಕೆ || ಈ ಶ್ಲೋಕದಲ್ಲಿ ನಿನ್ನನ್ನು ಆಶ್ರಯಿಸಿದ ಭಕ್ತೋತ್ತಮ ರನ್ನೇ ನೀನು ಪ್ರೀತಿಸುತ್ತಾ ನನ್ನಂತಹವರನ್ನು ಕೈಬಿಡುವುದು ಸರಿಯಲ್ಲ ವೆಂದು ದೇವರೊಡನೆ ವಾದಿಸಲಾಗುತ್ತದೆ.

|| ಶ್ಲೋ || ಯದ್ಯಪ್ಯನನ್ಯಶರಣೈಸ್ತ್ವದನನ್ಯಭಾವೈಃ
ಭಕ್ತೈಸ್ಸಮರ್ಚಿತಪದಃ ಪರಿರಕ್ಷಸೀವಾರ್ತ।
ಕಿಂ ತೇನ ಮಯ್ಯಪಿ ಕೃಪಾಂ ಕುರು ತೇ ಯಶಸ್ಸ್ಯಾತ್
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ || ೨೭ ||

(ತಾತ್ಪರ್ಯ) ಎಲೈ ವೇಂಕಟರಮಣಸ್ವಾಮಿಯೇ! ನಿನ್ನ ಪರಿಚರ್ಯೆಯ ನ್ನಲ್ಲದೇ ಅನ್ಯದೇವತಾರಾಧನೆಯನ್ನು ಮನಸ್ಸಿನಿಂದಲೂ ಕೂಡ ಮಾಡುವು ದಕ್ಕೆ ಇಷ್ಟಪಡದೇ ಅನನ್ಯ ಶರಣರಾಗಿ ನಿನ್ನಲ್ಲಿಯೇ ಸ್ಥಿರವಾದ ಭಕ್ತಿಭಾವ ದಿಂದ ಯಾರು. ನಿನ್ನ ಆರಾಧನೆಯನ್ನು ಮಾಡುತ್ತಿರುವರೋ ಅಂತಹ ಸುಕೃತಶಾಲಿಗಳನ್ನು ಮಾತ್ರ ನೀನು ಪ್ರೀತಿಸುತ್ತಾ, ಅವರನ್ನೇ ಪರಿಪಾಲಿಸು ತ್ತಿರುವೆ. ಹೀಗೆ ನಿನ್ನ ಪರಮ ಭಕ್ತರನ್ನು ಮಾತ್ರ ನೀನು ಉದ್ಧಾರ ಮಾಡುತ್ತಾ, ಉಳಿದ ನಮ್ಮಂತಹ ಪಾಪಿಗಳನ್ನು ಲಕ್ಷಿಸದೇ ಕೈಬಿಡುವು ದಾದರೆ ಅದರಿಂದ ನಿನಗೆ ಯಾವ ಮಹತ್ವವು ತಾನೇ ಉಂಟಾದೀತು? ಏತಕ್ಕೆಂದರೆ ಕೃತ ಪ್ರತಿ ಕೃತಗಳಿಂದ ಲೋಕ ಸಾಮಾನ್ಯರ ಸ್ಥಿತಿಯನ್ನು ನೀನೂ ಅನುಸರಿಸಿದಂತೆಯೇ ಆಗುತ್ತದೆ. ಆದುದರಿಂದ ನೀನು ಹಾಗೆ ಮಾಡದೇ ನನ್ನಂತಹ ಮಹಾ ಪಾಪಿಗಳಲ್ಲಿಯೂ ಕೂಡ ನಿನ್ನ ಕೃಪೆಯನ್ನು ತೋರಿಸಿ ನಮ್ಮನ್ನೂ ಉದ್ಧರಿಸು. ಆಗ ನಿನಗೆ ಉತ್ತಮವಾದ ಯಶಸ್ಸು

ದೊರೆಯುತ್ತದೆ. ಆದುದರಿಂದ ಎಲೈ ಶ್ರೀನಿವಾಸನೇ! ನಿನ್ನ ಪದಾವ ಲಂಬನವನ್ನು ಕೊಟ್ಟು ನನ್ನನ್ನು ಸಂರಕ್ಷಿಸು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಮೇಲೆ ಹೇಳಿದ ಭಕ್ತೋತ್ತಮರ ನೆನಪಿನಿಂದ ಅಂತಹ ಕೆಲವು ಭಕ್ತರನ್ನು ಧ್ಯಾನಿಸುತ್ತಾ ಅವರ ಹಿರಿಮೆ ಯನ್ನೂ ತನ್ನ ದುಷ್ಕೃತವನ್ನೂ ವಿವರಿಸಿ ಭಗವಂತನಲ್ಲಿ ತನ್ನ ರಕ್ಷಣವನ್ನು ಪ್ರಾರ್ಥಿಸಲಾಗಿದೆ.

॥ ಶ್ಲೋ ॥ ನಾಹಂ ಶುಕೋನವಿದುರೋ ನವಿಭೀಷಣೋವಾ
ನೋಮಾರುತಿರ್ನಚಬಲಿರ್ನಗುಹೋನಭೀಷ್ಮಃ
ಪಾಪೀಯಸಾಮುಚರಮೋಽಸ್ಮ್ಯವ ತತ್ಕೃಪಾಳೋ!
ಶ್ರೀ ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೨೮ ॥

(ತಾತ್ಪರ್ಯ) ಎಲೈ ಭಕ್ತಾಶ್ರಯನಾದ ಭಗವಂತನೇ "ಮಮ ಮಾಯಾ ದುರತ್ಯಯಾ" ಎಂದು ಭಗವದ್ಗೀತೆಯಲ್ಲಿ ನೀನು ಹೇಳಿರುವಂತೆ ಎಂತಹ ದೇವಾಧಿದೇವತೆಗಳನ್ನೂ ಕೂಡ ನಿನ್ನ ಮಾಯಾಜಾಲದಲ್ಲಿ ಸಿಲುಕಿಸಿ, ಅವರನ್ನೂ ವಂಚಿಸಿ ವಿನೋದಿಸುವೆ. ಒಂದೊಂದು ಸಮಯದಲ್ಲಿ ನಿನ್ನ ಭಕ್ತೋತ್ತಮರನ್ನೂ ಸಹ ಅಂತಹ ಮಾಯಾಪಾಶದಲ್ಲಿ ಬಿಗಿದು ಮೋ ಹಾಂಧರನ್ನಾಗಿ ಮಾಡಿ ಪರೀಕ್ಷಿಸಿ ವಿನೋದಿಸುತ್ತಾ ಕಡೆಯಲ್ಲಿ ಅವರನ್ನು ದಯೆಯಿಂದ ಸಂರಕ್ಷಿಸುವೆ. ಇಂತಹ ನಿನ್ನ ವಿಚಿತ್ರ ಸ್ವಭಾವವನ್ನು ತಿಳಿ ದಿರುವ ಕೆಲವು ಭಕ್ತೋತ್ತಮರು ನೀನೆಸಗುವ ಅಂತಹ ಭಕ್ತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ನಿನ್ನನ್ನು ತಮ್ಮ ಕೈವಶಮಾಡಿಕೊಂಡು ನಿನ್ನ ಲೀಲಾಕಾರ್ಯ ಗಳನ್ನು ನಿರೀಕ್ಷಿಸಿ ಆನಂದಿಸುತ್ತಾ ಯಾವಾಗಲೂ ನಿನಗೆ ಅಚ್ಚುಮೆಚ್ಚಾಗಿರು ವರು. ಆ ರೀತಿಯಾದ ಭಾಗ್ಯವನ್ನು ಪಡೆದಿರುವ ಭಕ್ತವೃಂದದ ಮಧ್ಯದಲ್ಲಿ ನಾನು ಯಾರಾದರೂ ಒಬ್ಬನಾಗಿರಲು ಅರ್ಹತೆಯನ್ನು ಪಡೆಯುವುದಕ್ಕೆ ಅಂತರ್ಮುಖಿ ಯಾದ ಶುಕಮಹರ್ಷಿಯೇ ಅಥವಾ ಭಕ್ತೋತ್ತಮನಾದ ವಿದುರನೇ ಅಥವಾ ಮಹಾತ್ಮನಾದ ವಿಭೀಷಣನೇ? ಹಾಗಲ್ಲದಿದ್ದರೆ ಅದ್ಭುತ ಮಹಿಮನಾದ ಆಂಜನೇಯನೇ? ಅದೂ ಅಲ್ಲದಿದ್ದರೆ ಸುಕೃತಶಾಲಿಯಾದ ಬಲಿಚಕ್ರ

ಪಕ್ಷಿಯೇ ? ಅಥವಾ ಭಾಗ್ಯಶಾಲಿಯಾದ ಗುಹನೇ ? ಅಥವಾ ಜ್ಞಾನಿಗಳಲ್ಲೆಲ್ಲಾ ಉತ್ತಮನಾದ ಭೀಷ್ಮಾಚಾರ್ಯನೇ ? ಇವರಲ್ಲಿ ನಾನು ಯಾರೊಬ್ಬರೂ ಅಲ್ಲವಲ್ಲಾ ? ಆದರೆ ನಾನೆಂತಹವನೆಂದರೆ ? ಇವರೆಲ್ಲರಿಗಿಂತಲೂ ವಿರುದ್ಧ ಸ್ವಭಾವವುಳ್ಳವನೂ ಮತ್ತು ಪ್ರಪಂಚದಲ್ಲೆಲ್ಲಾ ಪರಮ ಪಾಪಿಷ್ಠರೆಂಬುವವರಲ್ಲಿ ಮೊದಲನೆಯವನೂ ಆಗಿರುವೆನು. ಆದುದರಿಂದ ಪರಮ ಕೃಪಾಳುವಾದ ಎಲೈ ವೇಂಕಟರಮಣಸ್ವಾಮಿಯೇ ! ನಿನ್ನ ಅಮೋಘವಾದ ಕೃಪೆಯನ್ನು ಇಂತಹ ನನ್ನಲ್ಲಿ ತೋರಿಸು. ಆದರಿಂದ ನನ್ನ ಸಮಸ್ತ ಪಾಪಗಳನ್ನೂ ಕ್ಷಮಿಸು. ಆಮೇಲೆ ನನ್ನನ್ನು ನಿನ್ನವನನ್ನಾಗಿ ಭಾವಿಸಿ ನಿನ್ನ ಪದಪಂಕಜಾಶ್ರಯವನ್ನು ಕೊಟ್ಟು ಕಾಪಾಡು. ಹೀಗೆ ಮಾಡಿದರೇನೇ ನಿನ್ನ ಅಪಾರವಾದ ಕರುಣೆಯು ಸಾರ್ಥಕವಾಗುವುದು.

॥ ಅವತಾರಿಕೆ ॥ "ಗೀತೆಯಲ್ಲಿ ನನ್ನನ್ನು ಹೊಂದುವ ಮಾರ್ಗವನ್ನೆಲ್ಲಾ ಉಪದೇಶಿಸಿರುವೆನಾದ್ದರಿಂದ ಅದರಂತೆ ಅನುಷ್ಠಿಸಿ ನನ್ನನ್ನು ನೀನು ಹೊಂದಬಹುದೆಂದು" ಹೇಳಲು ಸಿದ್ಧನಾಗಿರುವ ಪರಮಾತ್ಮನಲ್ಲಿ ಯಾವುದಕ್ಕೂ ಅಶಕ್ತನಾದ ತನ್ನನ್ನು ಕೇವಲ ಕೃಪಾಮಾತ್ರದಿಂದ ನೀನೇ ಉದ್ಧರಿಸಬೇಕೆಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿಕೊಳ್ಳಲಾಗುತ್ತದೆ.

॥ ಶ್ಲೋ ॥ ಗೀತೋಪದೇಶಮಖಿಲಂ ಶ್ರುತವಾನಹಂಭೋಃ
ಕರ್ತುಂ ತಥೇಷದಪಿ ಮಾಧವ ! ನಾಸ್ಮಿ ಶಕ್ತಃ ।
ಆಹುಸ್ತ್ವದೀಯ ಕರುಣಾಮಹಿಮಾನಮುಚ್ಚೈಃ
ತದ್ವೇಂಕಟೇಶ ! ಮಮ ದೇಹಿ ಪದಾವಲಂಬಂ ॥ ೨೯ ॥

(ತಾತ್ಪರ್ಯ) ಎಲೈ ಸರ್ವಶಕ್ತನಾದ ಮಾಧವನೇ ನೀನು ಭಗವದ್ಗೀತೆಯಲ್ಲಿ ಎಲ್ಲಾ ಧರ್ಮತತ್ವಗಳ ಸ್ವರೂಪವನ್ನೂ ವಿಸ್ತಾರವಾಗಿ ಉಪದೇಶಿಸುತ್ತಾ ನಿನ್ನನ್ನು ಹೊಂದಬೇಕಾದ ಮಾರ್ಗವನ್ನೇನೋ ಬಹಳ ಸುಲಭವಾಗಿ ಹೇಳಿರುವೆ. ಈ ನಿನ್ನ ಉಪದೇಶವನ್ನು ನಾನು ಬೇಕಾದಷ್ಟು ಕೇಳಿಯೂ ಇರುವೆನು. ಆದರೆ ಅದರಂತೆ ನಡೆದುಕೊಳ್ಳುವ ವಿಷಯದಲ್ಲಿ ಮಾತ್ರ ನಾನು ಸ್ವಲ್ಪವೂ ಶಕ್ತನಲ್ಲವು. ಇದಕ್ಕೆ ನನ್ನ ಅಪರಿಮಿತವಾದ ಪಾಪ

ರಾಶಿಯೇ ಕಾರಣವಿರಬಹುದು. ಅದು ಹೇಗಾದರೂ ಇರಲಿ ನೀನು ಮಾತ್ರ ನನ್ನ ತಪ್ಪುಗಳನ್ನು ಲೆಕ್ಕಿಸದೆ ಕೃಪೆಮಾಡಿ ನನ್ನನ್ನು ಉದ್ಧರಿಸು, ಒಂದು ವೇಳೆ ಇಂತಹ ಪಾಪಿಯನ್ನು ಉದ್ಧರಿಸಲು ಹೇಗೆ ಸಾಧ್ಯವಾದೀತೆಂದು ನನ್ನನ್ನು ತಿರಸ್ಕರಿಸಿರಬಹುದು. ಆದರೆ ಪರಮ ದಯಾಳುವಾದ ಸ್ವಾಮಿಯೇ ! ನಿನ್ನ ಸದ್ಗುಣಗಳನ್ನು ತಿಳಿದಿರುವ ಜ್ಞಾನಿಗಳು ನಿನ್ನ ಅಮೋಘವಾದ ಕರುಣಾರಸದ ಮಹತ್ವವನ್ನು ವಿಶೇಷವಾಗಿ ಹೊಗಳಿ ಹೇಳಿರುವರು. ಆದುದರಿಂದ ಎಲೈ ವೇಂಕಟರಮಣಸ್ವಾಮಿಯೇ ನಿನ್ನ ಕರುಣಾರಸದ ಮುಂದೆ ನನ್ನ ದೋಷಗಳೊಂದೂ ನಿಲ್ಲಲಾರವೆಂಬುದನ್ನು ಚೆನ್ನಾಗಿ ತಿಳಿದಿರುವೆನು ಆದುದರಿಂದಲೇ ನನ್ನಲ್ಲಿ ಕೃಪೆಮಾಡಿ ನಿನ್ನ ಪದಾವಲಂಬನವನ್ನಿತ್ತು ಪರಿಪಾಲಿಸು

|| ಅವತಾರಿಕೆ || ಚೇತನರಿಗೆ ಸುಖ-ದುಃಖಾದಿಗಳ ಅನುಭವವು ಅವರವರ ಕರ್ಮಾನುಗುಣವಾಗಿಯೇ ಉಂಟಾಗುವುದು. ಅದನ್ನು ತಪ್ಪಿಸುವುದಕ್ಕೆ ಯಾರಿಗೂ ಸಾಧ್ಯವಿಲ್ಲವೆಂಬ ನಿಯಮವನ್ನು ಸರ್ವಶಕ್ತನಾದ ನೀನು ಬದಿಗಿರಿಸಿ ನನ್ನನ್ನು ರಕ್ಷಿಸೆಂದು ಈ ಶ್ಲೋಕದಲ್ಲಿ ಪ್ರಾರ್ಥಿಸಲಾಗುತ್ತದೆ.

|| ಶ್ಲೋ || ತ್ವಂ ಕರ್ಮಣಃಪ್ರಬಲತಾಂ ಭವಿನಾಂ ನಿರೂಪ್ಯ
ಯುಕ್ತ್ಯಾತಟಸ್ಥ ಇವತಾನ್ನವಿಲೋಕಸೇ ಚೇತ್ ।
ತಾದೃಕ್ಕಲೌನಸುಲಭಸ್ಸುಕೃತೀತವೇಷ್ಟಃ
ತದ್ವೇಂಕಟೇಶ ಮಮ ದೇಹಿ ಪದಾವಲಂಬಂ || ೩೦ ||

(ತಾತ್ಪರ್ಯ) ಎಲೈ ವೇಂಕಟರಮಣಸ್ವಾಮಿಯೇ ! ಪಾಪಿಷ್ಠರಾದ ನಮ್ಮನ್ನು ತಿರಸ್ಕರಿಸಿ ಕೈಬಿಡುವುದಕ್ಕೆ ನೀನು ಮತ್ತೊಂದು ಉಪಾಯವನ್ನು ಕಲ್ಪಿಸಬಹುದು. ಅದೇನೆಂದರೆ ? "ಎಲೈ ಚೇತನರಿರಾ ! ನಾನು ಸರ್ವಜಗದ್ರಕ್ಷಣ ನಿರ್ವಹಣಾನುಕೂಲ್ಯಕ್ಕಾಗಿ ಕೆಲವು ನಿಯಮಗಳನ್ನು ಶಾಸನರೂಪವಾಗಿ ಮೊದಲೇ ಏರ್ಪಡಿಸಿರುವೆನು. ಅದೇನೆಂದರೆ ? ಅನಾದಿಯಾದ ಕರ್ಮಪರಂಪರೆಯು ಚೇತನರನ್ನು ಎಡಬಿಡದೇ ಅನುಸರಿಸುತ್ತಾ, ಆಯಾ ಪುಣ್ಯ ಪಾಪ ರೂಪವಾದ ಕರ್ಮಗಳು ತದನುಗುಣವಾಗಿ ಚೇತನರಿಗೆ ಸುಖ-ದುಃಖ ರೂಪವಾದ ಫಲಗಳನ್ನು ಉಂಟುಮಾಡುತ್ತಿರಲಿ. ಪುಣ್ಯ

ಕರ್ಮಗಳಿಂದ ಒಳ್ಳೆಯ ಸುಖ ಸಂಪದಗಳೂ, ಪಾಪಕರ್ಮದಿಂದ ಆಧಿವ್ಯಾಧಿಯೇ ಮೊದಲಾದ ದುಃಖಗಳೂ ಜೀವಿಗಳಿಗೆ ತನಗೆ ತಾನಾಗಿಯೇ ಕರ್ಮಕ್ಕೆ ತಕ್ಕಂತೆ ಉಂಟಾಗುತ್ತಿರುವುದರಿಂದಲೇ ಆಯಾ ಕರ್ಮಗಳ ನಿವೃತ್ತಿಯು. ಎಂಬ ಕಟ್ಟಪ್ಪಣೆಯನ್ನು "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಎಂಬ ನಿಯಮಾನುಸಾರ ಮಾಡಿಬಿಟ್ಟಿರುವೆನು. ಆದುದರಿಂದ ನಿಮ್ಮ ನಿಮ್ಮ ಸುಖ ದುಃಖಾದಿಗಳ ಪ್ರಾಪ್ತಿಗೆ ನೀವೇ ಕಾರಣಭೂತರು. ನಾನು ಈ ವಿಚಾರದಲ್ಲಿ ಏನನ್ನೂ ಮಾಡಲಾರೆನು. ಈ ವಿಷಯದಲ್ಲಿ ನಾನು ತಟಸ್ಥನಾಗಿರುವೆನು" ಎಂದು ಯುಕ್ತಿಯ ಮಾತುಗಳಿಂದ ನಮ್ಮನ್ನು ದೂರಮಾಡಬಹುದು. ಹಾಗೆ ಚೇತನರ ಪುಣ್ಯ, ಪಾಪ ಕರ್ಮಗಳಿಗೇ ಪ್ರಾಧಾನ್ಯವನ್ನು ಕೊಟ್ಟು ಸರ್ವಶಕ್ತನಾದ ನೀನು ಚೇತನೋದ್ಧಾರ ಕಾರ್ಯಕ್ಕಾಗಿ ಏನೆಂದು ಪ್ರಯತ್ನವನ್ನೂ ಮಾಡದಿದ್ದರೆ ದುರದೃಷ್ಟಶಾಲಿಗಳಾದ ಈ ಸಂಸಾರಿಗಳು ಉದ್ಧಾರವಾಗುವ ಬಗೆ ಹೇಗೆ ? ವಿಮರ್ಶಿಸಿ ನೋಡಿದರೆ ಇವರು ಎಂದೆಂದಿಗೂ ಪಾಪಕೂಪದಲ್ಲಿಯೇ ಬಿದ್ದಿರಬೇಕಲ್ಲದೇ ನಿನ್ನನ್ನು ಸೇರುವಂತೆಯೇ ತೋರುವುದಿಲ್ಲ, ಏಕೆಂದರೆ ! ಪಾಪಮಯವಾದ ಈ ಕಲಿಯುಗದಲ್ಲಿ ಸರ್ವರೂ ಪಾಪಕರ್ಮನಿರತರಾಗಿಯೇ ಇರುವರು ಹಾಗಲ್ಲದೇ ನಿನ್ನಲ್ಲಿ ಅನನ್ಯ ಭಾವದಿಂದ ಭಕ್ತಿಯಿಟ್ಟು ನಿನ್ನ ಪ್ರೀತಿಗೆ ಪಾತ್ರರಾಗಲು ಅರ್ಹರಾದ ಮಹಾತ್ಮರು ದೊರೆಯುವುದು ಬಹಳ ವಿರಳವಲ್ಲವೇ ? ಆದುದರಿಂದ ಪಾಪಿಷ್ಠ ಜನಗಳ ಉದ್ಧಾರವೂ ಆಗಬೇಕೆಂಬ ಸಂಕಲ್ಪವುಳ್ಳ ಕರುಣಾಮೂರ್ತಿಯಾದ ನೀನು ನಿನ್ನ ಕೃಪೆಗೆ ಪ್ರಾಮುಖ್ಯವನ್ನು ಕೊಟ್ಟು ಚೇತನರ ಕರ್ಮಗಳ ಪ್ರಾಬಲ್ಯವನ್ನು ನಿನ್ನ ಸರ್ವಶಕ್ತತ್ವದ ಸಾಮರ್ಥ್ಯದಿಂದ ನಿವಾರಿಸಿ ನನ್ನಂತಹವರನ್ನು ಪರಿಪಾಲಿಸುವುದಕ್ಕಾಗಿ ನಿನ್ನ ಪಾದಾರವಿಂದದ ಆಶ್ರಯವನ್ನು ಕೊಟ್ಟು ಉದ್ಧಾರಮಾಡು.

|| ಅವತಾರಿಕೆ || ಈ ಶ್ಲೋಕದಲ್ಲಿ ನಿನ್ನ ಭಕ್ತರ ಸಂಪರ್ಕವನ್ನು ನಾನು ಹೊಂದಿರುವೆನಾದ್ದರಿಂದ ನೀನು ನನ್ನನ್ನು ಪರಿಗ್ರಹಿಸಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸಿಕೊಳ್ಳಲಾಗುತ್ತದೆ.

|| ಶ್ಲೋ || ಗಂಗಾದಿತೀರ್ಥಮಹಿಮಾಧಿಕಪುಣ್ಯಪೂತ
ಶ್ರೀ ಸ್ವಾಮಿಪುಷ್ಕರಣಿಕಾಪ್ಲವಧೂತಪಾಪಾಃ ।
ತ್ವದ್ದಾಸ್ಯಸಕ್ತಮನಸಃಕೃತಿನಃಸ್ಮರಾಮಿ
ತದ್ವೇಂಕಟೇಶ ಮಮ ದೇಹಿ ಪದಾವಲಂಬಂ || ೩೧ ||

(ತಾತ್ಪರ್ಯ) ಪಾವನ ಚರಿತ್ರನಾದ ಎಲೈ ಪದ್ಮಾವತೀಪ್ರಿಯನೇ ! ನಿನ್ನ ಪದಕಮಲಗಳ ಆಶ್ರಯವನ್ನು ಪಡೆಯಬೇಕಾದರೆ ನಿನ್ನ ಭಕ್ತೋತ್ತಮರ ಅನುಗ್ರಹಕ್ಕೆ ಮೊದಲು ಪಾತ್ರರಾಗಬೇಕೆಂದೂ ಹಾಗಲ್ಲದೇ ಸದಾಚಾರ್ಯಾನುಗ್ರಹವನ್ನು ಬಿಟ್ಟು ನಿನ್ನ ಕಟಾಕ್ಷವನ್ನು ಪಡೆಯಲು ಸಾಧ್ಯವಿಲ್ಲವೆಂದೂ ತಿಳಿದು, ನಿನ್ನ ಸೇವಾ ನಿರತರಾದ ಭಕ್ತೋತ್ತಮರ ಸಂಪರ್ಕವನ್ನು ಹೊಂದಿರುವೆನೆಂದು ನಿನ್ನಲ್ಲಿ ಅರಿಕೆಮಾಡಿಕೊಳ್ಳುತ್ತಿರುವೆನು. ಗಂಗೆಯೇ ಮೊದಲಾದ ಎಲ್ಲಾ ಪುಣ್ಯತೀರ್ಥಗಳಿಗಿಂತಲೂ ಅತ್ಯಧಿಕ ಮಾಹಾತ್ಮ್ಯದಿಂದ ಪವಿತ್ರತಮವೆಂದು ಪ್ರಖ್ಯಾತಿಯನ್ನು ಪಡೆದಿರುವ ಶ್ರೀ ಸ್ವಾಮಿ ಪುಷ್ಕರಣೀ ತೀರ್ಥದಲ್ಲಿ ಪ್ರತಿದಿನವೂ ಸ್ನಾನಮಾಡಿ ತಮ್ಮ ಸಮಸ್ತ ಪಾಪಗಳನ್ನೂ ನೀಗಿಕೊಂಡು ನಿನ್ನ ಚರಣ ಕಮಲಗಳ ಪರಿಚರ್ಯೆಯಲ್ಲಿಯೇ ಯಾವಾಗಲೂ ನಿರತರಾಗಿರುವ ಭಾಗ್ಯಶಾಲಿಗಳಾದ ಭಕ್ತೋತ್ತಮರನ್ನು ಪೂಜ್ಯ ಭಾವದಿಂದ ಸ್ಮರಿಸುತ್ತಿರುವೆನು ಮತ್ತು ಅವರಂತೆಯೇ ನನಗೂ ನಿನ್ನ ನಿತ್ಯದಾಸ್ಯವನ್ನು ಕರುಣಿಸೆಂದು ನಿನ್ನಲ್ಲಿ ಪ್ರಾರ್ಥಿಸುತ್ತಿರುವೆನು. ಆದುದರಿಂದ ಎಲೈ ವೇಂಕಟೇಶನೇ ನಿನ ಪದಕಮಲಗಳ ಆಶ್ರಯವನ್ನು ನನಗೆ ಕರುಣಿಸಿ ನನ್ನನ್ನು ಉದ್ಧಾರಮಾಡು.

|| ಅವತಾರಿಕೆ || ಎಲೈ ವೇಂಕಟರಮಣಸ್ವಾಮಿಯೇ ನಾನು ಇಷ್ಟು ವಿಧವಾಗಿ ಪ್ರಾರ್ಥಿಸಿಕೊಂಡ ಮೇಲೂ ನೀನು ಲೀಲಾ ವಿಭೂತಿಯ ಕಾರ್ಯಕ್ರಮವನ್ನು ವಿವರಿಸುವ ನೆಪದಿಂದ ನನ್ನನ್ನು ಕೈಬಿಡಬಾರದೆಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿಕೊಳ್ಳಲಾಗುತ್ತದೆ.

|| ಶ್ಲೋ || ಸತ್ಯಂ ಬ್ರವೀಮಿ ಹೃದಿ ದುಸ್ಸಹದುಃಖದಗ್ಧಃ
ಕೀಟೇಷು ಬಾಲ ಇವ ಖೇಲಸಿ ಸಂಸೃತೌ ಮಾಂ ।
ನಿಕ್ಷಿಪ್ಯ ಹಂತ ಕಿಮಿದಂ ಸುಖದಂ ದಯಾಳೋಃ
ತದ್ವೇಂಕಟೇಶ ಮಮ ದೇಹಿ ಪದಾವಲಂಬಂ || ೩೨ ||

(ತಾತ್ಪರ್ಯ) ಸರ್ವಾಂತರ್ಯಾಮಿಯಾದ ಎಲೈ ವೇಂಕಟರಮಣಸ್ವಾಮಿಯೇ ಅನಾದಿಯಾದ ಕಾಲದಿಂದ ತೊಡಗಿ ಇದುವರೆವಿಗೂ ನಾನು ಪುಣ್ಯ-ಪಾಪ ಕರ್ಮಾನುಗುಣವಾಗಿ ಅನೇಕ ಕೋಟಿ ಕೋಟಿ ಜನ್ಮಗಳನ್ನು ಪಡೆದು ಅನೇಕ ಕಷ್ಟಗಳನ್ನು ಅನುಭವಿಸಿದ್ದಾಯಿತು. ಈಗ ನಿನ್ನ ಕೃಪೆಯಿಂದಲೇ ದುರ್ಲಭವಾದ ಈ ಮನುಷ್ಯಜನ್ಮವನ್ನು ಪಡೆದಿರುವೆನು. ಆದರೂ ಈ ಮನುಷ್ಯ ಜನ್ಮದಲ್ಲಿ ತಾನೇ ಏನು ಸುಖವಿದೆ. ಇದರಲ್ಲಿಯೂ ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕಗಳೆಂಬ ಬಹುವಿಧ ದುಃಖಗಳು ಆಧಿವ್ಯಾಧಿ ರೂಪದಲ್ಲಿ ನಿರಂತರವೂ ಪೀಡಿಸುತ್ತಿರುವುವು. ಒಂದೊಂದು ವೇಳೆ ನಮಗೆ ಸುಖರೂಪವಾಗಿ ತೋರಿಬರುವ ವಿಷಯಾನುಭವಗಳೂ ಕೂಡ ದುಃಖ ರೂಪವಾಗಿಯೇ ಪರಿಣಮಿಸುವುವು. ಹೀಗಿರುವ ಈ ಸಂಸಾರವೆಂಬ ದುರ್ಗಮವಾದ ಅರಣ್ಯದಲ್ಲಿ ನಮ್ಮ ಕರ್ಮಗಳೆಂಬ ಕಾಡುಕಿಚ್ಚಿನ ಮಧ್ಯೆ ಅದರ ಫಲಾನುಭವಗಳೆಂಬ ದಳ್ಳುರಿಯ ಜ್ವಾಲೆಯಿಂದ ಸುಟ್ಟು ಕಂದಿಕುಂದಿ ರುವ ಹೃದಯವುಳ್ಳ ನಾನು, ಯಾತನೆಯನ್ನು ಸಹಿಸಲಾರದೇ ನಿನ್ನಲ್ಲಿ ಸತ್ಯವಾದ ಒಂದು ವಿಚಾರವನ್ನು ಅರಿಕೆಮಾಡಿಕೊಳ್ಳುತ್ತಿರುವೆನು. ಅದೇ ನೆಂದರೆ, ಲೋಕದಲ್ಲಿ ಪ್ರಾಯಶಃ ಚಿಕ್ಕಮಕ್ಕಳು ಹುಡುಗಾಟಕ್ಕಾಗಿ ಕ್ರಿಮಿ ಕೀಟಗಳನ್ನು ಹಿಡಿದುಕೊಂಡು ಅವುಗಳನ್ನು ನಾನಾ ಬಗೆಯಾಗಿ ಹಿಂಸಿಸು ವಾಗ ಯಾತನೆಯನ್ನು ತಡೆಯಲಾರದೇ ಒದ್ದಾಡುತ್ತಿರುವ ಅವುಗಳನ್ನು ನೋಡಿ ಸಂತೋಷದಿಂದ ಹಿಗ್ಗಿ ಕುಣಿದಾಡುವುವು. ಅದರಂತೆ ನೀನೂ ಸಹ ಈ ಲೀಲಾ ವಿಭೂತಿಯಲ್ಲಿ ನಮ್ಮನ್ನು ಸಂಸಾರವೆಂಬ ಮಹಾ ವಿಪತ್ತಿನಲ್ಲಿ ಸಿಕ್ಕಿಸಿ ದುಸ್ಸಹ ದುಃಖಗಳಿಂದ ನಾವು ನರಳುತ್ತಿರುವುದನ್ನು ನೋಡಿ ಆನಂದಿಸುತ್ತಿರುವೆಯಲ್ಲವೇ ? ಆದರೆ ಚಿಕ್ಕ ಮಕ್ಕಳಿಗೆ ಆ ಹುಳುಗಳ ನೋವನ್ನು ತಿಳಿಯುವ ಸಾಮರ್ಥ್ಯವಿಲ್ಲದುದರಿಂದ ಅವರು ಆ ರೀತಿ ಸಂತೋಷಿಸುವರು. ಎಲೈ ವೇಂಕಟರಮಣಸ್ವಾಮಿಯೇ ! ನೀನು ಸರ್ವಜ್ಞ ನಾಗಿಯೂ ದಯಾಳುವಾಗಿಯೂ ಇರುವೆಯಲ್ಲವೇ ? ಇಂತಹ ನಿನಗೆ ನಾವು ಸಂಸಾರದಲ್ಲಿ ಕಷ್ಟಪಡುತ್ತಿರುವುದು ಸುಖದಾಯಕವಾಗಿರುವುದೇ ಆದುದರಿಂದ ಪರಮ ದಯಾಳುವಾದ ಶ್ರೀಮನ್ನಾರಾಯಣನೇ ನಮ್ಮ ಕಷ್ಟ ಗಳನ್ನೆಲ್ಲಾ ಪರಿಹರಿಸುವುದಕ್ಕಾಗಿ ಅಮೋಘವಾದ ನಿನ್ನ ದಯಾರಸ ವೃಷ್ಟಿ

ಯನ್ನು ನಮ್ಮ ಮೇಲೆ ವರ್ಷಿಸಿ ನಮ್ಮ ಪಾಪರೂಪವಾದ ಕೊಳೆಯನ್ನೆಲ್ಲಾ ತೊಳೆದು ಪರಿಶುದ್ಧರನ್ನಾಗಿ ಮಾಡಿ ಶಾಶ್ವತ ಸುಖದಾಯಕವಾದ ನಿನ್ನ ಚರಣಕಮಲಗಳ ಆಶ್ರಯವನ್ನು ಕೊಟ್ಟು ನಮ್ಮನ್ನು ಕಾಪಾಡು.

॥ ಅವತಾರಿಕೆ ॥ ಹಿಂದಿನ ಅವತಾರಗಳಲ್ಲಿ ಆಶ್ರಿತ ಸಂರಕ್ಷಣೆಯನ್ನು ಮಾಡುವ ವಿಚಾರದಲ್ಲಿ ನೀನು ಮಾಡಿರುವ ಪ್ರತಿಜ್ಞೆಯನ್ನಾದರೂ ಜ್ಞಾಪಿಸಿ ಕೊಂಡು ನನ್ನನ್ನು ಪರಿಪಾಲಿಸೆಂದು ಈ ಶ್ಲೋಕದಲ್ಲಿ ಪರಮಾತ್ಮನನ್ನು ಕೇಳಿಕೊಳ್ಳಲಾಗಿದೆ.

॥ ಶ್ಲೋ ॥ ಉಕ್ತ್ವಾ ಪ್ರಪನ್ನಜನಪಾಲನಮಾತ್ಮಧರ್ಮಂ
ರಾಮೋನಚ ದ್ವಿರಭಿಭಾಷತಇತ್ಯುದೀರ್ಯ ।
ತ್ಯಕ್ತುಂ ಕಥಂಪ್ರಭವಸಿ ತ್ವಯಿ ಮಾಂಪ್ರಪನ್ನಂ
ತದ್ವೇಂಕಟೇಶ ಮಮ ದೇಹಿ ಪದಾವಲಂಬಂ ॥ ೩೩ ॥

(ತಾತ್ಪರ್ಯ) ಎಲೈ ವೇಂಕಟರಮಣಸ್ವಾಮಿಯೇ ! ನೀನು ರಾಮನಾಗಿ ಅವ ತರಿಸಿದ್ದಾಗ, ಶತ್ರು ಪಕ್ಷದ ವಿಭೀಷಣನು ಬಂದು "ರಾಘವಂ ಶರಣಂಗತಃ" ಎಂದು ಹೇಳಿದ ಮಾತ್ರಕ್ಕೇ ಅವನ ಗುಣದೋಷಗಳೊಂದನ್ನೂ ವಿಚಾರಿಸದೇ ಅವನಿಗೆ ಅಭಯವನ್ನು ಕೊಟ್ಟು ಕಾಪಾಡಲು ನಿರ್ಧರಿಸಿದೆ. ಆ ಸಂದರ್ಭ ದಲ್ಲಿ ನಿನ್ನ ಆಪ್ತರಾದ ಸುಗ್ರೀವಾದಿ ಕಪಿಗಳೆಲ್ಲರೂ ವಿಭೀಷಣನನ್ನು ಪರಿ ಗ್ರಹಿಸುವ ವಿಚಾರದಲ್ಲಿ ತಮ್ಮೆಲ್ಲರ ಅಸಮ್ಮತಿಯನ್ನು ಯುಕ್ತಿಯುಕ್ತವಾದ ಮಾತುಗಳಿಂದ ಅರಿಕೆಮಾಡಿಕೊಂಡರು. ನೀನು ಅವರ ಮಾತುಗಳನ್ನೆಲ್ಲಾ ನಿರಾಕರಿಸಿ, "ಸಕೃದೇವಪ್ರಪನ್ನಾಯ ತವಾಸ್ಮೀತಿಚ ಯಾಚತೇ । ಅಭಯಂ ಸರ್ವಭೂತೇಭ್ಯೋದದಾಮ್ಯೇತದ್ವ್ರತಂಮಮ" ಎಂದು ನಿನ್ನ ಪ್ರತಿಜ್ಞೆಯನ್ನು ಅವರೆಲ್ಲರ ಸಮ್ಮುಖದಲ್ಲಿಯೂ ಸಾರಿ ಹೇಳಿ ವಿಭೀಷಣ ನನ್ನು ನಿನ್ನವನನ್ನಾಗಿ ಸ್ವೀಕರಿಸಿದೆಯಷ್ಟೆ ? ಆ ಪ್ರತಿಜ್ಞಾವಚನವು ನಿನಗೆ ಇನ್ನೂ ಮರೆತುಹೋಗಿಲ್ಲವೆಂದು ನಾನು ನಂಬಿರುವೆನು ಅಥವಾ ಆ ಸಂದರ್ಭದಲ್ಲಿ ಕಾಲಾನುಗುಣವಾಗಿ ಆ ರೀತಿ ಹೇಳಬೇಕಾಗಿ ಬಂದುದರಿಂದ

ಪ್ರತಿಜ್ಞೆಯಂತೆ ಹೇಳಿದೆನು. ಆ ಮಾತನ್ನೇ ಸರ್ವದಾ ಅನುಸರಿಸಲು ಹೇಗೆ ಸಾಧ್ಯವು ? ಎಂದು ನೀನು ತಪ್ಪಿಸಿಕೊಳ್ಳುವಂತೆಯೂ ಇಲ್ಲ. ಏಕೆಂದರೆ ? "ರಾಮೋದ್ವಿರ್ನಾಭಿಭಾಷತೇ" ಎಂದರೆ, ರಾಮನು ಎಂದಿಗೂ ಸುಳ್ಳನ್ನು ಹೇಳುವವನಲ್ಲವು ಎಂದು ಬೇರೆ ಹೇಳಿಕೊಂಡಿರುವೆ. ಹೀಗೆಲ್ಲಾ ಇರುವುದ ರಿಂದ ಈಗ ನಾನು ನಿನ್ನಲ್ಲಿ ಶರಣಾರ್ಥಿಯಾಗಿ ಬಂದಿರುವಾಗ ನೀನು ಹೇಗೆ ತಾನೇ ನನ್ನನ್ನು ತಿರಸ್ಕರಿಸಿ, ಬಿಟ್ಟುಬಿಡಲು ಸಮರ್ಥನಾದೀಯೆ ? ಆದ್ದ ರಿಂದ ಎಲೈ ವೇಂಕಟರಮಣಸ್ವಾಮಿಯೇ ! ನಿನ್ನ ಪ್ರತಿಜ್ಞಾವಚನವನ್ನು ಉಳಿಸಿಕೊಳ್ಳುವುದಕ್ಕಾದರೂ ನನ್ನಲ್ಲಿ ಕೃಪೆಮಾಡಿ ನಿನ್ನ ಪದಾವಲಂಬನೆವನ್ನು ಕೊಟ್ಟು ಕಾಪಾಡು.

॥ ಅವತಾರಿಕೆ ॥ ಈ ಶ್ಲೋಕದಲ್ಲಿ ಕೃಷ್ಣಾವತಾರದಲ್ಲಿ ಮಾಡಿದ ಪ್ರತಿಜ್ಞೆ ಯನ್ನು ಶ್ರೀನಿವಾಸನ ನೆನಪಿಗೆ ತಂದು ನನ್ನನ್ನು ರಕ್ಷಿಸೆಂದು ಅವನಲ್ಲಿ ಪ್ರಾರ್ಥಿಸಿ ಕೊಳ್ಳಲಾಗುತ್ತದೆ.

॥ ಶ್ಲೋ ॥ ಭಕ್ತಃಪ್ರಣಶ್ಯತಿ ನಮೋ ಧ್ರುವಮಿತ್ಯುದೀರ್ಯ
ಕ್ರೋಶಂತಮೇವಮಗತಿಂ ಭವತಃಪುರಸ್ತಾತ್
ಮಾಂನೇಕ್ಷಸೇ ಯದಿ ತವ ಕ್ವಗತಾಪ್ರತಿಜ್ಞಾ
ತದ್ವೇಂಕಟೇಶ ಮಮದೇಹಿ ಪದಾವಲಂಬಂ ॥ ೩೪ ॥

(ತಾತ್ಪರ್ಯ) ಸತ್ಯಸಂಧನಾದ ಎಲೈ ವೇಂಕಟರಮಣಸ್ವಾಮಿಯೇ ! ನೀನು ಕೃಷ್ಣಾವತಾರದಲ್ಲಿ ಕೂಡ "ನಮೇ ಭಕ್ತಃಪ್ರಣಶ್ಯತಿ" "ಪ್ರತಿಜಾನೆ" ಎಂದರೆ ನನ್ನನ್ನು ನಂಬಿರುವ ಭಕ್ತರು ಎಂದೆಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ. ಅವರನ್ನು ಎಲ್ಲಾ ವಿಧದಿಂದಲೂ ಕಾಪಾಡಿಕೊಳ್ಳುತ್ತೇನೆ. ಎಂದೂ "ಮಾಮೇಕಂ ಶರಣಂವ್ರಜ। ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ, ಪ್ರತಿಜಾನೇ ಎಂದೂ ಅಂದರೆ. ನನ್ನನ್ನೇ ಆಶ್ರಯಿಸು ಪಾಪ ಸಂಬಂಧವೇ ಇಲ್ಲದಂತೇ ಮಾಡಿ ನಿನ್ನನ್ನು ರಕ್ಷಿಸುತ್ತೇನೆ. ಇದನ್ನು ಪ್ರತಿಜ್ಞೆಮಾಡಿ ಹೇಳುತ್ತಿರುವೆನು" ಎಂದು ಪ್ರತಿಜ್ಞಾ ವಚನಗಳಿಂದ ಸರ್ವ ರಿಗೂ ದೃಢವಾದ ನಂಬಿಕೆಯು ಹುಟ್ಟುವಂತೆ ಹೇಳಿರುವೆಯಷ್ಟೆ ? ಹೀಗೆ

ಮಾತು ಕೊಟ್ಟಿರುವ ನಿನ್ನ ಎದುರಿನಲ್ಲಿಯೇ ಘಟ್ಟಿಯಾಗಿ ಆರ್ತಸ್ವರದಿಂದ ಎಲೈ ಸ್ವಾಮಿಯೇ ! ಯಾರೂ ದಿಕ್ಕಿಲ್ಲದೇ ನಿನ್ನನ್ನೇ ನಂಬಿರುವ ನನ್ನನ್ನು ಕೈಬಿಡದೇ ಪರಿಪಾಲಿಸೆಂದು ಬಗೆ ಬಗೆಯಾಗಿ ನಾನು ಬೇಡಿಕೊಂಡು ಮೊರೆ ಯಿಡುತ್ತಿದ್ದರೂ ನಿನ್ನ ಶೀತಲ ಕೃಪಾಕಟಾಕ್ಷದಿಂದ ನನ್ನನ್ನು ಒಂದು ಸಲ ವಾದರೂ ಕಟಾಕ್ಷಿಸಿ ಅನುಗ್ರಹಿಸದೇ ಉದಾಸೀನನಾಗಿ ಇರುವೆಯೇ, ಆದರೆ ನಿನ್ನ ಆ ಸತ್ಯ ಪ್ರತಿಜ್ಞೆಗಳೆಲ್ಲಾ ಏನಾದವು ? ಆ ಸತ್ಯ ಪ್ರತಿಜ್ಞೆಗಳೂ ವ್ಯರ್ಥವಾಗುವುಗಳಾದರೆ ನಿನ್ನ ಸತ್ಯಸಂಧತೆಯೇನಾಯಿತು ? ಇವೆಲ್ಲವನ್ನೂ ಮನಸ್ಸಿನಲ್ಲಿ ವಿಮರ್ಶೆಮಾಡಿ ಆಲೋಚಿಸಿ ನೋಡು. ಎಲೈ ವೇಂಕಟರಮಣ ಸ್ವಾಮಿಯೇ ನಿನ್ನ ಕೃಪೆಯ ಮಹತ್ವವನ್ನೂ ಮತ್ತು ಪ್ರತಿಜ್ಞಾವಾಕ್ಯದ ಗೌರವವನ್ನೂ ಸಾರ್ಥಕಪಡಿಸುತ್ತಾ ನಿನ್ನ ಪದಪದ್ಮಗಳ ಅವಲಂಬನವನ್ನು ಕೊಟ್ಟು ನನ್ನನ್ನು ಕಾಪಾಡು.

॥ ಅವತಾರಿಕೆ ॥ ಕೃಪೆಯ ಪ್ರಾಮುಖ್ಯದಿಂದಲೇ ದಿವ್ಯಸೂರಿಕೃತಸೇವೋಪಚಾರಾದಿಗಳಿಗಿಂತಲೂ ಮನುಷ್ಯ ಕೃತೋಪಚಾರಗಳನ್ನು ಆದರದಿಂದ ಸ್ವೀಕರಿಸುತ್ತಿರುವ ನೀನು ಅಂತಹ ಕೃಪಾತಿಶಯದಿಂದಲೇ ನನ್ನನ್ನು ಕಟಾಕ್ಷಿಸೆಂದು ಈ ಶ್ಲೋಕದಲ್ಲಿ ಪ್ರಾರ್ಥಿಸಲಾಗುತ್ತದೆ.

॥ ಶ್ಲೋ ॥ ವಿಷ್ವಕ್ಸೇನಫಣೀಂದ್ರಪತ್ರಿಪತಿಭಿರ್ನಿತ್ಯೈಶ್ಚ ಮುಕ್ತೈಸ್ತಥಾ
ಪೂರ್ವಾಚಾರ್ಯಪರೈರನನ್ಯಶರಣೈರ್ದಿವ್ಯೈಶ್ಚ ಹಾಸೂರಿಭಿಃ ।
ದಿವ್ಯೇವ್ಯೋಮ್ನಿ ತಥಾತ್ರ ಚಾರ್ಚಿತಪದೋಽಪ್ಯಸ್ಮತ್ಕೃಪಾ
ಚಾರ್ಯಪ್ರಿಯಃ
ಶ್ರೀಶೇಷಾಚಲನಾಥ ದೇಹಿ ಮಮತೇ ಪಾದಾವಲಂಬಂ ಸದಾ
॥ ೩೫ ॥

(ತಾತ್ಪರ್ಯ) ಸರ್ವಲೋಕಪೂಜ್ಯನಾದ ಎಲೈ ಶೇಷಾಚಲಾಧಿಪತಿಯೇ ನಿನ್ನ ಅಂತರಂಗ ಪರಿಚರ್ಯಾನಿರತರಾದ ವಿಷ್ವಕ್ಸೇನ ಆದಿಶೇಷ ಗರುಡ ಇವರುಗಳೂ ಹಾಗೆಯೇ ನಿನ್ನಲ್ಲಿಯೇನ್ಯಸ್ತಭರರಾದ ನಿತ್ಯರೂ ಮುಕ್ತರೂ ಪೂರ್ವಾಚಾರ್ಯರೂ ಮತ್ತು ದಿವ್ಯಸೂರಿಗಳೂ ಸಹ ನಿನ್ನ ಕೈಂಕರ್ಯದಲ್ಲಿಯೇ

ನಿರತರಾಗಿ ಪರಮ ಪದದಲ್ಲಿ ಹೇಗೆ ಸರ್ವೋಪಚಾರಗಳನ್ನೂ ನಿನಗೆ ಮಾಡುತ್ತಿರುವರೋ ಹಾಗೆಯೇ ಈ ತಿರುಪತಿ ಕ್ಷೇತ್ರದಲ್ಲಿಯೂ ನಿನ್ನನ್ನು ಸತತವೂ ಆರಾಧಿಸುತ್ತಿರುವರು. ಹೀಗೆ ನೀನು ಅಂತಹ ದಿವ್ಯ ಪುರುಷರಿಂದ ಪೂಜೆಯನ್ನು ಸ್ವೀಕರಿಸುತ್ತಿದ್ದರೂ ಪಾಮರರಾದ ನಮ್ಮಂತಹ ಮನುಷ್ಯರು ಮಾಡುವ ಆರಾಧನೆಯಲ್ಲಿ ಅತಿಶಯವಾದ ಪ್ರೀತಿಯನ್ನು ತೋರಿಸುತ್ತಾ, ಇಂತಹ ಅಲ್ಪ ಸೇವೆಗಳನ್ನೂ ಆದರದಿಂದ ಸ್ವೀಕರಿಸುತ್ತಿರುವೆ. ಈ ರೀತಿ ಯಾದ ನಿನ್ನ ಸೌಲಭ್ಯ ಗುಣವನ್ನು ವರ್ಣಿಸಲು ಹೇಗೆ ಸಾಧ್ಯವಾದೀತು ? ಇಂತಹ ಸೌಲಭ್ಯ ಗುಣ ಪರಿಪೂರ್ಣನಾದ ಶ್ರೀನಿವಾಸದೇವನೇ ನಿನ್ನ ಪಾದಾ ರವಿಂದಾವಲಂಬನವನ್ನು ನನಗೆ ಸತತವೂ ಕೊಟ್ಟು ನನ್ನನ್ನು ಪರಿಪಾಲಿಸು.

|| ಅವತಾರಿಕೆ || ಕಡೆಯದಾದ ಈ ಶ್ಲೋಕದಲ್ಲಿ ಅರ್ಚಾವತಾರದಲ್ಲಿಯೂ ನಿನ್ನ ಅತಿಶಯ ಮಾಹಾತ್ಮ್ಯಗಳನ್ನು ಈ ತಿರುಪತಿ ಕ್ಷೇತ್ರದಲ್ಲಿ ಪ್ರಕಾಶಪಡಿ ಸುತ್ತಾ ನಮ್ಮನ್ನು ಉದ್ಧಾರಮಾಡೆಂದು ಪ್ರಾರ್ಥಿಸಲಾಗುತ್ತದೆ.

|| ಶ್ಲೋ ||
ದೇವಾಭೀಪ್ಸಿತಪೂರಣಾಯಭವತಾನಾನಾವತಾರಾಃ ಕೃತಾಃ
ಲೋಕಾತೀತಚರಿತ್ರ ವಿಸ್ಮಯಕರಂಮಾಹಾತ್ಮ್ಯಮಾವಿಷ್ಕೃತಂ
ಶೇಷಾದ್ರಾವಿಹ ದರ್ಶಯಂಸ್ತದಧಿಕಂ ಮಾಹಾತ್ಮ್ಯಮರ್ಚಾಕೃತೌ
ಶ್ರೀ ಶೇಷಾಚಲನಾಥ ದೇಹಿ ಮಮತೇ ಪಾದಾವಲಂಬಂಸದಾ ||೩೬||

(ತಾತ್ಪರ್ಯ) ಪುರುಷೋತ್ತಮನಾದ ಎಲೈ ಶ್ರೀನಿವಾಸಸ್ವಾಮಿಯೇ ದೇವತೆ ಗಳು ತಮಗೆ ಉಂಟಾಗುವ ವಿಪತ್ತುಗಳನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಕ್ಷೀರಸಮುದ್ರ ತೀರಕ್ಕೆ ಬಂದು ನಿನ್ನನ್ನು ಪ್ರಾರ್ಥಿಸಿಕೊಂಡಾಗಲೆಲ್ಲಾ ಅವರವರ ಕಷ್ಟಗಳನ್ನು ಪರಿಹರಿಸಿ ಅವರನ್ನು ಕಾಪಾಡುವುದಕ್ಕಾಗಿ ನೀನು ಎಷ್ಟೋ ಸಲ ಬಗೆ ಬಗೆಯಾದ ಅವತಾರಗಳನ್ನು ಪರಿಗ್ರಹಿಸಿರುವೆ. ಮತ್ತು ಆಯಾ ಅವ ತಾರಗಳಲ್ಲಿ ಲೋಕವಿಲಕ್ಷಣಗಳಾದ ಅದ್ಭುತ ಕಾರ್ಯಗಳನ್ನು ಮಾಡಿ ಊಹಿ ಸಲೂ ಸಾಧ್ಯವಿಲ್ಲದಂತಹ ನಿನ್ನ ಮಹಿಮೆಯನ್ನು ಪ್ರಕಾಶಪಡಿಸಿರುವೆ. ಈ ಶೇಷಾಚಲದಲ್ಲಿ ಅರ್ಚಾರೂಪದಿಂದ ದರ್ಶನ ಕೊಡುತ್ತಿರುವ ಎಲೈ ವೇಂಕ

ಟೇಶಸ್ವಾಮಿಯೇ ! ಈಗಲೂ ನೀನು ಹಿಂದಿನ ಮಹತ್ವಕ್ಕಿಂತಲೂ ಇನ್ನೂ ಅತಿಶಯವಾದ ಮಹಿಮೆಯನ್ನು ಈ ಅರ್ಚಾರೂಪದಲ್ಲಿಯೂ ಕೂಡ ಸಮಸ್ತ ಜನಗಳಿಗೂ ಪ್ರಕಾಶಪಡಿಸುತ್ತಾ, ನಮ್ಮಂತಹ ಪಾಪಿಗಳನ್ನೂ ಕಟಾಕ್ಷಿಸಿ ನಿನ್ನ ಪಾದಪದ್ಮಗಳ ಅವಲಂಬನವನ್ನು ಸತತವೂ ಕೊಟ್ಟು ಕಾಪಾಡು.

॥ ಅವತಾರಿಕೆ ॥ ಸ್ತೋತ್ರಕರ್ತನ ಹೆಸರೂ, ಈ ಸ್ತೋತ್ರದ ಪ್ರಾಶಸ್ತ್ಯವೂ ಸಹ ಈ ಶ್ಲೋಕದಲ್ಲಿ ಸೂಚಿಸಲಾಗುತ್ತದೆ.

॥ ಶ್ಲೋ ॥ ಇತ್ಯಸ್ಯ ವೇಂಕಟಪತೇರ್ಹಿ ಪದಾವಲಂಬ-
ಸ್ತೋತ್ರಂ ತದೀಯಪದಪಂಕಜಕಿಂಕರೇಣ ।
ಶ್ರೀ ಶಿಂಗರಾರ್ಯಕವಿನಾ ರಚಿತಂ ವಿಭಾತಿ
ಶ್ರೇಯಸ್ಕರಂ ವೃಷಗಿರೀಂದ್ರಕೃಪಾನಿದಾನಂ ॥ ೩೭ ॥

(ತಾತ್ಪರ್ಯ) ವೇಂಕಟಾಚಲಾಧೀಶ್ವರನಾದ ಶ್ರೀನಿವಾಸಸ್ವಾಮಿಯ ಪದಾವಲಂಬ ಸ್ತೋತ್ರವೆಂಬ ಈ ಗ್ರಂಥವು ಶ್ರೀ ವೇಂಕಟರಮಣಸ್ವಾಮಿಯ ಪದಪಂಕಜ ಕಿಂಕರನಾದ ಜಗ್ಗು ಶಿಂಗರಾರ್ಯನೆಂಬ ಕವಿಯಿಂದ ವಿರಚಿಸಲ್ಪಟ್ಟಿರುತ್ತೆ. ಈ ಸ್ತೋತ್ರವು ಶ್ರೀನಿವಾಸನ ಕೃಪಾಕಟಾಕ್ಷವನ್ನು ಪಡೆಯಲು ಕಾರಣಭೂತವಾಗಿಯೂ ಸಮಸ್ತ ಶ್ರೇಯಸ್ಸುಗಳನ್ನೂ ಉಂಟುಮಾಡತಕ್ಕದಾಗಿಯೂ ಪ್ರಕಾಶಿಸುತ್ತಿರುವುದು. ಆದುದರಿಂದ ಸಮಸ್ತ ಭಗವದ್ಭಕ್ತರೂ ಈ ಸ್ತೋತ್ರವನ್ನು ಆದರದಿಂದ ಸ್ವೀಕರಿಸಿ, ಇದರ ಅರ್ಥಾನುಸಂಧಾನಪೂರ್ವಕವಾಗಿ ಈ ಶ್ಲೋಕಗಳನ್ನು ಕಂಠಪಾಠಮಾಡಿ ಸ್ತೋತ್ರಕರ್ತನ ಸೇವೆಯನ್ನು ಸಾರ್ಥಕಪಡಿಸಬೇಕಾಗಿ ಪ್ರಾರ್ಥನೆ.

ಕರ್ಣಾಟಕ ಭಾಷಾ ತಾತ್ಪರ್ಯ ಸಮೇತಂ
ಶ್ರೀ ವೇಂಕಟೇಶಪದಾವಲಂಬ ಸ್ತೋತ್ರಂ
★ ಸಂಪೂರ್ಣಂ ★
ಶ್ರೀ ಕೃಷ್ಣಾರ್ಪಣಮಸ್ತು

ಶ್ರೀಃ

ಶ್ರೀ ಶೇಷಾಚಲಾಧೀಶಾಯ ನಮಃ

ಶ್ರೀಮತೇ ರಾಮಾನುಜಾಯ ನಮಃ

## ಶ್ರೀ ಶೇಷಾಚಲಾಧೀಶಸನ್ನಿಧೌಮಂಗಳ ಪ್ರಾರ್ಥನಾಷ್ಟಕಂ

ಶ್ರೀಭೂಮಿಪ್ರಮುಖಾನುರೂಪಮಹಿಷೀಬೃಂದಾಂಗರಾಗದ್ರವಾ
ಮಂದಾನಂದಕರಾತಿಸುಂದರಕುಚಾಶ್ಲೇಷಾಂಕಿತೋರಸ್ಥಲಃ ।
ಭಾವ್ಯೈರ್ಭಕ್ತಜನೈಃಕೃತೇಷು ಸತತಂ ನಿತ್ಯೋತ್ಸವೇಷೂತ್ಸಕಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ನಾನಾರತ್ನವಿರಾಜಮಾನಮುಕುಟಾಲಂಕಾರಮೂರ್ಧಾನಮ-
ದ್ಬ್ರಹ್ಮೇಂದ್ರಾದ್ಯಮರಾಳಿಭಿರ್ಮಣಿರುಚಾ ನೀರಾಜಿತಾಂಘ್ರಿದ್ವಯಃ ।
ವಿಷ್ವಕ್ಸೇನಖಗೇಶಶೇಷರಚಿತಾಶೇಷೋಪಚಾರಾದೃತಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ವೇದಾಂತೈರನಿಶಂವಿಚಾರನಿರತೈರ್ಯೋಽಮೃಗ್ಯತೇ ಸಾಗ್ರಹೈಃ
ಯೋಗೀ ಸಂಯಮನೇನ ಯಂ ಪರತರಂ ಚಿತ್ತೇ ನಿಧತ್ತೇ, ಸದಾ
ಯೋಽವಾ ಸರ್ವಜಗತ್ಪತಿಸ್ಸಭಗವಾನ್ಶ್ರೀಮಾನ್ದಯಾವಾನ್ಮಹಾನ್
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ವಾಯುರ್ವಾತಿ ಭಿಯಾ, ರವಿಃಪ್ರತಪತಿ ಜ್ಯೋತ್ಸ್ನಾಂ ವಿಧತ್ತೇ ವಿಧುಃ
ವೇಲಾಂ ಪಾಲಯತಿ ಸ್ವಯಂ ಜಲನಿಧಿರ್ವಹ್ನಿರ್ದಹತ್ಯನ್ವಹಂ ।
ಯಸ್ಯಾವ್ಯಾಹತಶಾಸನಾನ್ಮುರರಿಪುಸ್ಸೋಽಯಂ ಜಗದ್ವ್ಯಾಪಕಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ನಿತ್ಯೋಜನ್ಮಜರಾದಿಭಿರ್ವಿಕೃತಿಭಿರ್ಮುಕ್ತೋಽಪಿ, ಭಕ್ತಪ್ರಿಯಃ
ಲೋಕತ್ರಾಣಕೃತೇ ಕೃತಾಕೃತಿರಯಂ ನಾನಾವತಾರಚ್ಛಲಾತ್ ।
ಶ್ರೀವತ್ಸೇನ ಚ ಕೌಸ್ತುಭೇನ ಜಯದೈಃಪಂಚಾಯುಧೈರಂಚಿತಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ನಾನಾಚಿತ್ರಚರಿತ್ರಖೇಲನರತೋಽಭರ್ತಾಪಿ ಲಕ್ಷ್ಮ್ಯಾಸ್ಸ್ವಯಂ
ಪದ್ಮಾವತ್ಯಭಿಧಾಂ ವಧೂಂಚ ಭಗವಾನಾಕಾಶರಾಜಾತ್ಮಜಾಂ ।
ಲಕ್ಷ್ಮ್ಯಂಶಾಂ ಪರಿಣೀಯ ಸರ್ವಜಗತಾಂ ಕಲ್ಯಾಣದಾತಾಸ್ತಿಯಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ಸೀತಾಂ ಯೋಮಿಥಿಲಾಪುರೇ ಹರಧನುರ್ಭಂಕ್ತ್ವಾಗ್ರಹೀದ್ರಾಘವಃ
ಶ್ರೀಕೃಷ್ಣಃಸ್ವರಥೇಽಧಿರೋಪ್ಯ ಸಹಸಾ ಯೋರುಕ್ಮಿಣೀಮಗ್ರಹೀತ್ ।
ಸೋಽಯಂ ಮಂಗಳದಾಯಕಃಪ್ರಣಮತಾಂ ಪದ್ಮಾವತೀವಲ್ಲಭಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ಉದ್ವಾಹೋತ್ಸವಪತ್ರಿಕಾಪ್ರಕಟನಾರಂಭೇ ಜನಾಃಪ್ರಾಯಶೋ
ಯನ್ನಾಮಾಂಕಿತಮಂಗಳಸ್ತುತಿಪರಂ ಶ್ಲೋಕಂ,ಲಿಖಂತ್ಯಗ್ರತಃ ।
ಸೋಯಂಮಂಗಳಮೂರ್ತಿರಾಶ್ರಿತಜನತ್ರಾಣೋನ್ಮುಖಃಶ್ರೀಸಖಃ
ಶ್ರೀಶೇಷಾಚಲತುಂಗಶೃಂಗನಿಲಯಃಕುರ್ಯಾನ್ಮುಹುರ್ಮಂಗಳಂ

ಇತ್ಯೇತಾನ್ವೃಷಶೈಲನೇತೃಸವಿಧೇ ಸಂಪ್ರಾರ್ಥಿತಾನ್ಮಂಗಳ
ಶ್ಲೋಕಾನಷ್ಟ ವರಾನ್ವಿವಾಹಸಮಯೇ ಶೃಣ್ವಂತಿ ಗಾಯಂತಿಯೇ ।
ತೇಷಾಂ ಶ್ರೀರಮಣಪ್ರಸಾದಜನಿತಂ ಪೂರ್ಣಾಯುರಾರೋಗ್ಯಮ
ಪ್ಯೈಶ್ವರ್ಯಂಚಯಶಶ್ಚ ಮಂಗಳಮಪಿ ಪ್ರಾದುರ್ಭವಂತಿಧ್ರುವಂ

ಇತಿ ಜಗ್ಗು ಶಿಂಗರಾರ್ಯ ವಿರಚಿತಂ ಶ್ರೀ ಶೇಷಾಚಲಾಧೀಶಸನ್ನಿಧೌ
ಮಂಗಳಪ್ರಾರ್ಥನಾಷ್ಟಕಂ ಸಂಪೂರ್ಣಂ

# जग्गुशिङ्गरार्येण विरचिता काव्यमाला

यदुशैलचम्पूः　　　　श्रीवेङ्कटेशपदावलम्बस्तोत्रम्
दाशरथिचरितं　　　　श्रीशेषाचलमङ्गलप्रार्थनाष्टकम्

एतत्ग्रन्थचतुष्टयं मुद्रितम्

## अमुद्रितानि काव्यानि :

1. एकश्लोकरामायणम्
2. एकश्लोकभागवतम्
3. श्रीशारदास्तोत्रपञ्चकम्
4. श्रीकृष्णप्रार्थनापञ्चकम्
5. श्रीनृसिंहस्तुतिपञ्चकम्
6. दूर्वासक्षेत्रस्थाञ्जनेयस्तुतिः
7. श्रीरामानुजस्तोत्रम्
8. श्रीस्तवदशकम्
9. श्रीबालकृष्णस्तुतिः
10. श्रीयदुशैलेशमधुरस्तुतिः
11. अर्चाच्युतार्चनम्
12. श्रीयदुगिरिनारायणमङ्गलाशासनम्
13. श्रीशांघ्रिस्तुतिः
14. ततःकिंपद्यानि
15. श्रीकृष्णवराङ्गस्तुतिः
16. श्रीकृष्णकथारहस्यम्

## नाटकानि :

यक्षप्रश्ननाटकम्　　　　धर्मव्याधदर्शनम्
शिबिवैभवम् (संस्कृत प्रतिभायां प्रकटितम्)

---

*For copies write to :*

Pandit Jaggu Singraiengar
Sanskrit Pandit,
Someswarapuram, TUMKUR, Mysore State